RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>**Volume 148** | ಬೆಂಗಳೂರು, ಗುರುವಾರ, ಫೆಬ್ರವರಿ ೨೧, ೨೦೧೩ (ಫಾಲ್ಗುಣ ೨, ಶಕ ವರ್ಷ ೧೯೩೪)<br>**Bangalore, Thursday, February 21, 2013 (Phalguna 2, Shaka Varsha 1934)** | ಸಂಚಿಕೆ ೮<br>**Issue 8** |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಪುರಸಭಾ ಹಾಗೂ ಪೌರಾಡಳಿತ ನಿರ್ದೇಶನಾಲಯದ ವಿವಿಧ ವೃಂದದ ನೌಕರರುಗಳನ್ನು ಕೆ.ಎಂ.ಎ.ಎಸ್. ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸುವ ಕುರಿತು– ಆದೇಶ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ : ನಅಇ 258 ಇಎಂಸಿ 94, ದಿನಾಂಕ 9–12–1998.
2. ಸರ್ಕಾರದ ಆದೇಶ ಸಂಖ್ಯೆ : ನಅಇ 34 ಇಎಂಸಿ 2005, ಬೆಂಗಳೂರು, ದಿನಾಂಕ 29–7–2005.
3. ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಪೌನಿ ಸಿಬ್ಬಂದಿ/ ಕೆಎಂಎಎಸ್/ ಸಿಆರ್/40/2007–08, ದಿನಾಂಕ 10–9–2009, 26–7–2011 ಮತ್ತು ದಿನಾಂಕ 9–5–2012.
4. ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ : ಪೌನಿ ಸಿಬ್ಬಂದಿ/ಸಿಆರ್/ 114/04–05, ದಿನಾಂಕ 25–9–2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶ ಸಂಖ್ಯೆ : ನಅಇ 258 ಇಎಂಸಿ 94, ದಿನಾಂಕ 9–12–1998ರ ಕಾರ್ಯಕಾರಿ ಆದೇಶದ ಪ್ರಕಾರ ಐದು ವರ್ಷ ಸೇವೆ ಸಲ್ಲಿಸಿದ ಪುರಸಭಾ ಹಾಗೂ ಪೌರಾಡಳಿತ ನಿರ್ದೇಶನಾಲಯದ ವಿವಿಧ ವೃಂದದ ನೌಕರರನ್ನು ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ಕಾರ್ಯಕಾರಿ ಆದೇಶದ ಮೂಲಕ ವಿಲೀನಗೊಳಿಸಿ ಆದೇಶಿಸಲಾಗಿತ್ತು. ಪೌರಸೇವಾ ವೃಂದದ ಕಿರಿಯ ಆರೋಗ್ಯ ನಿರೀಕ್ಷಕರ ಹುದ್ದೆಯಿಂದ ವ್ಯವಸ್ಥಾಪಕರ ಹುದ್ದೆಗೆ ಹಾಗೂ ಬಿಲ್ ಕಲೆಕ್ಟರ್ ಹುದ್ದೆಯಿಂದ ಕಂದಾಯಾಧಿಕಾರಿ ಹುದ್ದೆಗೆ ಬಡ್ತಿ ಹೊಂದಲು ಸುಮಾರು 10 ವರ್ಷಗಳು ಬೇಕಾಗಿದ್ದು, ಇದರಿಂದಾಗಿ 3 ಪ್ರವರ್ಗಗಳಿಗೆ ಮುಂಬಡ್ತಿಗೆ ಬೇಕಾದ ಅನುಪಾತವು ಸಮನಾಗಿರಬೇಕೆಂದು, ಹಾಗೂ ಪೌರಾಡಳಿತ ನಿರ್ದೇಶನಾಲಯದ ನೌಕರರಿಗೆ ಮುಂಬಡ್ತಿ ಅವಕಾಶ ಇಲ್ಲದೇ ಇರುವುದರಿಂದ ಅವರಿಗೂ ಸಹ ಕೆಎಂಎಎಸ್ ವೃಂದದಲ್ಲಿ ವಿಲೀನಗೊಳಿಸಿ ಬಡ್ತಿಗೆ ಅವಕಾಶ ಕಲ್ಪಿಸಬೇಕೆಂಬ ಅಂಶಗಳನ್ನು ಮನಗಂಡು ಸರ್ಕಾರದ ಆದೇಶ ಕ್ರಮ ಸಂಖ್ಯೆ (1)ರ ದಿನಾಂಕ 9–12–1998ರ ಆದೇಶದಲ್ಲಿರುವ ಅನುಪಾತವನ್ನು ಪರಿಷ್ಕರಿಸಿ ಈ ಕೆಳಕಂಡಂತೆ ಅನುಪಾತವನ್ನು ನಿಗದಿಪಡಿಸಿ ಮೇಲೆ ಓದಲಾದ ಕ್ರಮಸಂಖ್ಯೆ (2)ರ ದಿನಾಂಕ 29–7–2005ರಲ್ಲಿ ಆದೇಶಿಸಲಾಗಿದೆ:–

| | | | |
|---|---|---|---|
| I. | Direct Recruitment | | 33 1/3 |
| II. | By Absorption | | 66 2/3 |
| | 1) Managers belongs to Municipal Service | 21.50% | |
| | 2) Revenue Officers belongs to Municipal Service | 21.50% | |
| | 3) Sr. Health Inspectors belongs to Municipal Service | 21.50% | |
| | 4) Manager in the office of the Director of Municipal Administration | 2.16% | |

ಮೇಲೆ ಓದಲಾದ ಕ್ರಮಸಂಖ್ಯೆ (3) ರನ್ವಯ ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ ರವರು ಪ್ರಸ್ತುತ ನಗರ ಸ್ಥಳೀಯ ಸಂಸ್ಥೆಗಳಲ್ಲಿ ವಿವಿಧ ವೃಂದದಲ್ಲಿ ಐದು ವರ್ಷಕ್ಕಿಂತ ಹೆಚ್ಚಿಗೆ ಸೇವೆ ಸಲ್ಲಿಸುತ್ತಿರುವ ನೌಕರರುಗಳನ್ನು ವಿಲೀನಗೊಳಿಸುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿದ್ದು, ಅದರಂತೆ ರಾಜ್ಯದಲ್ಲಿ ಒಟ್ಟು 68 ಪಟ್ಟಣ ಪಂಚಾಯತಿಗಳು ಅಸ್ತಿತ್ವದಲ್ಲಿದ್ದು, ಒಟ್ಟು 46 ಹುದ್ದೆಗಳು ಖಾಲಿ ಇದ್ದು, ಅರ್ಹ ನೌಕರರನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (4)ರನ್ವಯ ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು ರವರು ಶ್ರೀ ಗುರುಸಿದ್ದಯ್ಯ, ಕಂದಾಯಾಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇದ್ದ ಕಾರಣ ಇವರಿಗಿಂತ ಸೇವೆಯಲ್ಲಿ ಕಿರಿಯರಾದ ಶ್ರೀ ಜಿ. ಸುಬ್ಬರಾವ್, ಶ್ರೀ ರಾಮೇಗೌಡ, ಶ್ರೀ ಡೇವಿಡ್ ಇವರಿಗೆ ಕರ್ನಾಟಕ ಮುನಿಸಿಪಾಲಿಟಿ ಅಧಿನಿಯಮ 1964ರ ಕಲಂ 365(2)(ಎ)ರ ಪ್ರಕಾರ ಸರ್ಕಾರದ ಆದೇಶ ಸಂಖ್ಯೆ : ನಅಇ 62 ಇಎಂಸಿ 2003, ದಿನಾಂಕ 28–4–2005 ರನ್ವಯ ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಿ ಆದೇಶಿಸಲಾಗಿದೆ. ನಂತರ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಟ್ಟಿದ್ದರಿಂದ ಸದರಿ ದಿನಾಂಕದಿಂದ ಪೂರ್ವಾನ್ವಯವಾಗಿ ಶ್ರೀ ಗುರುಸಿದ್ದಯ್ಯ ಇವರನ್ನು ಕೆ.ಎಂ.ಎ.ಎಸ್. ಶ್ರೇಣಿ–2 ಹುದ್ದೆಗೆ ವಿಲೀನಗೊಳಿಸಿ ಆದೇಶ ಹೊರಡಿಸಲು ಆಯುಕ್ತರು, ಪೌರಾಡಳಿತ ನಿರ್ದೇಶನಾಲಯರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪೌರಾಡಳಿತ ನಿರ್ದೇಶನಾಲಯದ ಮೇಲೆ ಓದಲಾದ ಕ್ರಮಸಂಖ್ಯೆ (3)ರ ದಿನಾಂಕ 9–5–2012ರ ಪ್ರಸ್ತಾವನೆಯಲ್ಲಿ ಪೌರಸಭಾ ವೃಂದದ ಕಛೇರಿ ವ್ಯವಸ್ಥಾಪಕರು, ಕಂದಾಯಾಧಿಕಾರಿಗಳು, ಹಾಗೂ ಹಿರಿಯ ಆರೋಗ್ಯ ನಿರೀಕ್ಷಕರುಗಳನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಲು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯೊಂದಿಗೆ ಪೌರಾಡಳಿತ ನಿರ್ದೇಶನಾಲಯದ ಇಬ್ಬರು ಕಛೇರಿ ವ್ಯವಸ್ಥಾಪಕರಾದ ಶ್ರೀ ಟಿ.ಕೆ.ಈರಾನಾಯ್ಕ ಹಾಗೂ ಶ್ರೀಮತಿ ಎಸ್. ರಾಜಮ್ಮ, ಕೆ.ಎಂ.ಎ.ಎಸ್. ವೃಂದದ ಮುಖ್ಯಾಧಿಕಾರಿ ಶ್ರೇಣಿಯಲ್ಲಿದ್ದು, ಇವರುಗಳು ಮುಖ್ಯಾಧಿಕಾರಿ ಶ್ರೇಣಿ–1 ವೃಂದಕ್ಕೆ ಮುಂಬಡ್ತಿ ಹೊಂದಿರುವ ಕಾರಣ ಸದರಿ 2 ಹುದ್ದೆಗಳಿಗೆ ಪೌರಾಡಳಿತ ಕಛೇರಿಯ ವ್ಯವಸ್ಥಾಪಕರಿಂದ ವಿಲೀನಗೊಳಿಸಬೇಕಾಗಿದೆ ಎಂದು ಹಾಗೂ ಶ್ರೀಮತಿ ಎಸ್.ಅಂಬಿಕಾ ಮತ್ತು ಶ್ರೀ ಡಿ. ಚನ್ನರಾಯಪ್ಪ ಇವರುಗಳು ಕೆ.ಎಂ.ಎ.ಎಸ್. ವೃಂದದಲ್ಲಿ ವಿಲೀನಗೊಳಿಸಲು ಅರ್ಹರಿದ್ದು, ಇವರನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಹಾಲಿ ಮುಖ್ಯಾಧಿಕಾರಿ ಶ್ರೇಣಿ–2ರ ವೃಂದದ ಹುದ್ದೆಗಳು ಖಾಲಿ ಇರುವ ವಿವರ**

| ಕ್ರಮ ಸಂಖ್ಯೆ | ವೃಂದದ ವಿವರ | ಖಾಲಿ ಇರುವ ಹುದ್ದೆಗಳ ಸಂಖ್ಯೆ |
|---|---|---|
| 1 | ಕಛೇರಿ ವ್ಯವಸ್ಥಾಪಕರು | 07 |
| 2 | ಕಂದಾಯಾಧಿಕಾರಿಗಳು | 08 |
| 3 | ಹಿರಿಯ ಆರೋಗ್ಯ ನಿರೀಕ್ಷಕರು | 07 |
| 4 | ಪೌರಾಡಳಿತ ನಿರ್ದೇಶನಾಲಯ ವ್ಯವಸ್ಥಾಪಕರು | 02 |
| | **ಒಟ್ಟು ಖಾಲಿ ಹುದ್ದೆ** | **24** |

ಮೇಲೆ ತಿಳಿಸಿದಂತೆ ಕೆ.ಎಂ.ಎ.ಎಸ್. ಮುಖ್ಯಾಧಿಕಾರಿಗಳು ಶ್ರೇಣಿ–2 ವೃಂದದಲ್ಲಿ ಒಟ್ಟು 46 ಹುದ್ದೆಗಳನ್ನು ವಿಲೀನಗೊಳಿಸುವ ಮೂಲಕ ತುಂಬಲು ಅವಕಾಶವಿದ್ದು, ಇದರಲ್ಲಿ ಪ್ರಸ್ತುತ 24 ಹುದ್ದೆಗಳು ಖಾಲಿ ಇದ್ದು, 11 ಅರ್ಹ ನೌಕರರು ಮಾತ್ರ ಜೇಷ್ಠತೆಯ ಆಧಾರದ ಮೇಲೆ ವಿಲೀನಗೊಳ್ಳಲು ಅರ್ಹರಿರುತ್ತಾರೆ. ಮತ್ತು ಈ ಎಲ್ಲಾ ನೌಕರರು ಕೆ.ಎಂ.ಎ.ಎಸ್. ವೃಂದದಲ್ಲಿ ವಿಲೀನಗೊಳ್ಳಲು ತಮ್ಮ ಸಹಮತಿಯನ್ನು ನೀಡಿರುತ್ತಾರೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲ್ಕಂಡ 10 ಜನ ವಿವಿಧ ವೃಂದದ ನೌಕರರುಗಳನ್ನು ಹಾಗೂ ಆಯುಕ್ತರು, ಪೌರಾಡಳಿತ ನಿರ್ದೇಶನಾಲಯರವರ ಪ್ರಸ್ತಾವನೆಯಂತೆ ಶ್ರೀ ಗುರುಸಿದ್ದಯ್ಯ, ಕಂದಾಯಾಧಿಕಾರಿ ಇವರಿಗೆ ದಿನಾಂಕ 28–04–2005 ರಿಂದ ಪೂರ್ವಾನ್ವಯವಾಗಿ ವಿಲೀನಗೊಳಿಸುವ ಬಗ್ಗೆ ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 224 ಇಎಂಸಿ 2009, ಬೆಂಗಳೂರು, ದಿನಾಂಕ : 05–06–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರ ಕಲಂ 365(1)(2)(ಎ)ರ ಪ್ರಕಾರ ಮೇಲೆ ತಿಳಿಸಿರುವ ವಿವಿಧ ವೃಂದಗಳ ಪುರಸಭಾ ಮತ್ತು ಪೌರಾಡಳಿತ ನಿರ್ದೇಶನಾಲಯದ ನೌಕರರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಶ್ರೀ ಗುರುಸಿದ್ದಯ್ಯ, ಇವರಿಗೆ ದಿನಾಂಕ 28–04–2005 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ಪೌರಸೇವಾ ವೃಂದದ ಅಧಿಕಾರಿಗಳೆಂದು ವೇತನ ಶ್ರೇಣಿ ರೂ. 8825–16000ರ (ಮುಖ್ಯಾಧಿಕಾರಿ ಶ್ರೇಣಿ–2) ಹುದ್ದೆಯಲ್ಲಿ ಸ್ಥಾನಪನ್ನ ಆಧಾರದ ಮೇಲೆ ವೇನತವನ್ನೊಳಗೊಂಡಂತೆ ಎಲ್ಲಾ ಸೇವಾ ಸೌಲಭ್ಯಗಳನ್ನು ಕೆ.ಎಂ.ಎ.ಎಸ್. ಅಧಿಕಾರಿಗೆ ಅನ್ವಯವಾಗುವ ಸೇವಾ ನಿಯಮಾವಳಿಗೊಳಪಟ್ಟು ಹಾಗೂ ಈ ಆದೇಶದಲ್ಲಿ ವಿಧಿಸಿರುವ ಷರತ್ತುಗಳಿಗೆ ಒಳಪಟ್ಟು ವಿಲೀನಗೊಳಿಸಿ ಆದೇಶಿಸಲಾಗಿದೆ.

**ಕಂದಾಯಾಧಿಕಾರಿಗಳ ವೃಂದದಿಂದ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳ್ಳುವ ಅಧಿಕಾರಿಯ ಹೆಸರು**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜೇಷ್ಠತಾ ಕ್ರಮ ಸಂಖ್ಯೆ |
|---|---|---|
| 1 | ಶ್ರೀ ಗುರುಸಿದ್ದಯ್ಯ, | ಶ್ರೀ ಗುರುಸಿದ್ದಯ್ಯ, ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಜಿ. ಸುಬ್ಬರಾವ್, ಶ್ರೀ ರಾಮೇಗೌಡ, ಮತ್ತಿತರರಿಗೆ ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2ಕ್ಕೆ ಸರ್ಕಾರದ ಆದೇಶ ಸಂಖ್ಯೆ: ನಅಇ 62 ಇಎಂಸಿ 2003 ದಿನಾಂಕ 28–4–2005 ವಿಲೀನಗೊಳಿಸಿದ್ದು, ಸದರಿ ದಿನಾಂಕದಿಂದ ಪೂರ್ವಾನ್ವಯವಾಗಿ ಇವರನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2ಕ್ಕೆ ವಿಲೀನಗೊಳಿಸಿದೆ. |

**ಕಛೇರಿ ವ್ಯವಸ್ಥಾಪಕರ ವೃಂದದಿಂದ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳ್ಳುವ ಅಧಿಕಾರಿಯ ಹೆಸರು**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜೇಷ್ಠತಾ ಕ್ರಮ ಸಂಖ್ಯೆ |
|---|---|---|
| 2 | ಶ್ರೀ ಎಚ್.ಎನ್. ಚಂದ್ರಶೇಖರ್ | 98 |
| 3 | ಶ್ರೀ ಎಚ್.ವಿ. ಹರೀಶ್ | 118 |
| 4 | ಶ್ರೀ ಎನ್. ಆಂಜನಪ್ಪ | 120 |
| 5 | ಶ್ರೀ ಎಂ.ಆರ್. ಮಂಜುನಾಥ್ | 121 |

**ಹಿರಿಯ ಆರೋಗ್ಯ ನಿರೀಕ್ಷಕರ ವೃಂದದಿಂದ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳ್ಳುವ ಅಧಿಕಾರಿಯ ಹೆಸರು**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜೇಷ್ಠತಾ ಕ್ರಮ ಸಂಖ್ಯೆ |
|---|---|---|
| 6 | ಶ್ರೀ ಎನ್.ಆರ್. ಮಠ | 63(ಎ) |
| 7 | ಶ್ರೀ ಎಸ್.ಜಿ. ಗೋಸಾವಿ | 145 |
| 8 | ಶ್ರೀ ಬಿ.ಆರ್. ಮಂಗಸುಳಿ | 150 |
| 9 | ಶ್ರೀ ಎಸ್.ಬಿ. ಪಾಟೀಲ | 158 |

**ಪೌರಾಡಳಿತ ನಿರ್ದೇಶನಾಲಯದ ಕಛೇರಿ ವ್ಯವಸ್ಥಾಪಕರ ವೃಂದದಿಂದ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳ್ಳುವ ಅಧಿಕಾರಿಗಳ ಹೆಸರು**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜೇಷ್ಠತಾ ಕ್ರಮ ಸಂಖ್ಯೆ |
|---|---|---|
| 10 | ಶ್ರೀಮತಿ ಎಸ್. ಅಂಬಿಕಾ | 05 |
| 11 | ಶ್ರೀ ಡಿ. ಚನ್ನರಾಯಪ್ಪ | 07 |

**ಷರತ್ತುಗಳು :**

1. ಈ ಮೇಲ್ಕಂಡ ನೌಕರರುಗಳು ಸರ್ಕಾರದ ಆದೇಶ ಸಂಖ್ಯೆ : ನಅಇ 258 ಇಎಂಸಿ 94, ದಿನಾಂಕ 9–12–1998 ರಲ್ಲಿ ತಿಳಿಸಿರುವಂತೆ ಮುಖ್ಯಾಧಿಕಾರಿ ಶ್ರೇಣಿ–2 ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಮುಖ್ಯಾಧಿಕಾರಿ ಶ್ರೇಣಿ–2 ಹುದ್ದೆಯಲ್ಲಿ ಕರ್ತವ್ಯ ವಹಿಸಿಕೊಂಡ ದಿನಾಂಕದಿಂದ ಎರಡು ವರ್ಷದೊಳಗಾಗಿ ಪಾಸು ಮಾಡತಕ್ಕದ್ದು.
2. ಪ್ರಸ್ತುತ ಹೊರಡಿಸಿರುವ ವಿವಿಧ ವೃಂದಗಳ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಯಾವುದೇ ಮಾರ್ಪಾಡುಗಳನ್ನು ಮಾಡಲು ನ್ಯಾಯಾಲಯಗಳು ಆದೇಶಿಸಿದಲ್ಲಿ, ಆ ಪ್ರಕಾರ ಪೌರಾಡಳಿತ ನಿರ್ದೇಶಕರು 2 ತಿಂಗಳೊಳಗಾಗಿ ಈ ಬಗ್ಗೆ ಪರಿಷ್ಕೃತ ಅಂತಿಮ ಜೇಷ್ಠತಾ ಪಟ್ಟಿಯನ್ನು ಹೊರಡಿಸಿ ಸರ್ಕಾರಕ್ಕೆ ತಿಳಿಸತಕ್ಕದ್ದು.

ಈ ಮೇಲ್ಕಂಡ ನೌಕರರುಗಳಿಗೆ ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸುವವರೆಗೆ ಮತ್ತು ಮುಂದಿನ ಆದೇಶದವರೆಗೆ ಅವರುಗಳನ್ನು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ವಿ. ರಾಮಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**PR. 90**

## ನಗರಾಭಿವೃದ್ಧಿ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ನಅಇ 224 ಇಎಂಸಿ 2009, ಬೆಂಗಳೂರು, ದಿನಾಂಕ: 11–09–2012.**

ಸರ್ಕಾರದ ಆದೇಶ ಸಂಖ್ಯೆ : ನಅಇ 224 ಇಎಂಸಿ 2009 ದಿನಾಂಕ 05–06–2012 ರ ಆದೇಶ ಭಾಗದಲ್ಲಿ ದಿನಾಂಕ 28–04–2005 ಕ್ಕೆ ಇದ್ದಂತೆ ಶ್ರೀ ಗುರುಸಿದ್ದಯ್ಯ ಇವರಿಗೆ ಅನ್ವಯವಾಗುವಂತೆ ಮುಖ್ಯಾಧಿಕಾರಿ ಶ್ರೇಣಿ–2 ವೃಂದದ ವೇತನ ಶ್ರೇಣಿಯನ್ನು ರೂ. 8,825–16,000/–ರ ಬದಲಿಗೆ ರೂ.4575–8400 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ವಿ. ರಾಮಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**PR. 91**

## ಇಂಧನ ಸಚಿವಾಲಯ

**ವಿಷಯ:** 2012–13ನೇ ಸಾಲಿಗೆ ಪರಿಶಿಷ್ಟ ಜಾತಿಗಳ ಉಪಯೋಜನೆಯಡಿ (SCP) ವಿದ್ಯುತ್ ಸರಬರಾಜು ಕಂಪನಿಗಳು ಕೈಗೊಂಡಿರುವ ಕಾಮಗಾರಿಗಳಿಗೆ ಹಣ ಬಿಡುಗಡೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 04 ಟಿಎಫ್‌ಪಿ 2012, ದಿನಾಂಕ 27–04–2012
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 22 ಪಿಎಸ್‌ಆರ್ 2012, ದಿನಾಂಕ 27–04–2012
3. ಸಮಾಜ ಕಲ್ಯಾಣ ಇಲಾಖೆಯ ಅ.ಟಿ. ಸಂಖ್ಯೆ : ಸಕಇ 31 ಎಸ್‌ಎಲ್‌ಪಿ 2012, ದಿನಾಂಕ 11–07–2012
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 31 ಪಿಎಸ್‌ಆರ್ 2012, ದಿನಾಂಕ 17–07–2012, ದಿನಾಂಕ 18–10–2012 ಮತ್ತು 04–12–2012.

**ಪ್ರಸ್ತಾವನೆ:**

1. 2012–13ನೇ ಸಾಲಿನ ಆಯವ್ಯಯದ ಅಂದಾಜಿನಲ್ಲಿ ಪರಿಶಿಷ್ಟ ಜಾತಿ ಉಪಯೋಜನೆಗೆ ಇಂಧನ ಇಲಾಖೆಯ ಲೆಕ್ಕಶೀರ್ಷಿಕೆ 4801–80–190–0–02–422 ಯಡಿ ರೂ. 3500.00 ಲಕ್ಷಗಳನ್ನು ಒದಗಿಸಿದೆ. ಸಮಾಜ ಕಲ್ಯಾಣ ಇಲಾಖೆ ರೂ. 3000 ಲಕ್ಷಗಳ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿದೆ.
2. ಸಮಾಜ ಕಲ್ಯಾಣ ಇಲಾಖೆಯ ನಡವಳಿ ದಿನಾಂಕ 11–07–2012ರ ಪ್ರಕಾರ ಇಂಧನ ಇಲಾಖೆ ಸಲ್ಲಿಸಿರುವ ವಿಸಕಂಗಳ ಕ್ರಿಯಾಯೋಜನೆಗಳನ್ನು ಅನುಮೋದಿಸಲಾಗಿದೆ. ಈ ಅನುದಾನವನ್ನು ಪರಿಶಿಷ್ಟ ಜಾತಿಯ ಬಸ್ತಿ/ಜನತಾ ಕಾಲೋನಿ/ತಾಂಡಗಳು ಮತ್ತು ಗಂಗಾ ಕಲ್ಯಾಣ ಯೋಜನೆಯಡಿ ನೀರಾವರಿ ಪಂಪುಸೆಟ್ಟುಗಳ ವಿದ್ಯುದ್ಧೀಕರಣ ಮತ್ತು ಕುಟೀರ ಜ್ಯೋತಿ ಕಾರ್ಯಕ್ರಮಗಳಿಗೆ ಬಳಸಲು ಸೂಚಿಸಿದೆ.
3. ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ : 17–07–2012, 18–10–2012 ಮತ್ತು 04–12–2012 ರಲ್ಲಿ ರೂ. 1000 ಲಕ್ಷಗಳು, ರೂ.750 ಲಕ್ಷಗಳು ಮತ್ತು ರೂ. 500 ಲಕ್ಷಗಳನ್ನು ಕ್ರಮವಾಗಿ ಈಗಾಗಲೇ ಬಿಡುಗಡೆ ಮಾಡಿದೆ.
4. 2012–13ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಮೊತ್ತದಲ್ಲಿ ರೂ. 750 ಲಕ್ಷಗಳನ್ನು ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 31 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ : 07–01–2013**

1. ಸರ್ಕಾರವು 2012–13ನೇ ಸಾಲಿಗೆ ರೂ. 750 (ಏಳು ನೂರು ಐವತ್ತು ಲಕ್ಷ ರೂ.ಗಳು ಮಾತ್ರ) ಲಕ್ಷಗಳನ್ನು ಪರಿಶಿಷ್ಟ ಜಾತಿಗಳ ಉಪಯೋಜನೆಯಡಿ (SCP) ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

**(ಲಕ್ಷ ರೂ.ಗಳಲ್ಲಿ)**

| ಕ್ರಮ ಸಂಖ್ಯೆ | ವಿದ್ಯುತ್ ಸರಬರಾಜು ಕಂಪನಿಗಳು | ಮೊಬಲಗು |
|---|---|---|
| 1 | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 125.00 |
| 2 | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 125.00 |
| 3 | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 175.00 |
| 4 | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 201.00 |
| 5 | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ | 124.00 |
| | **ಒಟ್ಟು ಮೊತ್ತ** | **750.00** |

2. ಈ ಮೊತ್ತವನ್ನು ಪರಿಶಿಷ್ಟ ಜಾತಿಯ ಬಸ್ತಿ/ಜನತಾ ಕಾಲೋನಿ/ತಾಂಡಗಳು ಮತ್ತು ಗಂಗಾ ಕಲ್ಯಾಣ ಯೋಜನೆಯಡಿ ನೀರಾವರಿ ಪಂಪುಸೆಟ್ಟುಗಳ ವಿದ್ಯುದ್ಧೀಕರಣ ಮತ್ತು ಕುಟೀರ ಜ್ಯೋತಿ ಕಾರ್ಯಕ್ರಮಗಳಿಗೆ ಮಾತ್ರ ಬಳಸತಕ್ಕದ್ದು ಮತ್ತು Utilization Certificateನ್ನು ಕಳುಹಿಸತಕ್ಕದ್ದು.
3. ಸದರಿ ಮೊತ್ತವನ್ನು ಲೆಕ್ಕ ಶೀರ್ಷಿಕೆ 4801–80–190–0–02–422 (ಯೋಜನೆ) ಯಡಿ ಭರಿಸತಕ್ಕದ್ದು.
4. ವಿದ್ಯುತ್ ಸರಬರಾಜು ಕಂಪನಿಗಳು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
5. ಇಂಧನ ಇಲಾಖೆಯ ಕಡತ ಸಂಖ್ಯೆ ಇಎನ್ 31 ಪಿಎಸ್‌ಆರ್ 2012 ರಲ್ಲಿ ಆರ್ಥಿಕ ಇಲಾಖೆ ನೀಡಿರುವ ಸಹಮತಿಯನ್ವಯ ಈ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR. 92**

## ಜಲಸಂಪನ್ಮೂಲ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸನೀಇ 11 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ: 29–12–2012.**

ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕಿನ ಕರದಾಳ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ : ಸನೀಇ 11 ಭೂಸ್ವಾಪ್ರ 2012,

ದಿನಾಂಕ 23–11–2012 ರಲ್ಲಿಯ ಪ್ರಸ್ತಾವನೆ ಭಾಗದಲ್ಲಿನ ತಃಖ್ತೆಯಲ್ಲಿ ನಮೂದಿಸಿರುವ ಓಕಳಿ ಗ್ರಾಮದ ಸ.ನಂ. 356 ಎಂಬುದಕ್ಕೆ ಬದಲಾಗಿ ಅಳ್ಳೊಳ್ಳಿ ಗ್ರಾಮದ ಸ.ನಂ. 356 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಪಿ. ಸಿದ್ದಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ. (ಸಣ್ಣ ನೀರಾವರಿ)

**PR. 97**

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಬಿ.ಕೆ ಶಿವಣ್ಣ, ಕ್ಷೇತ್ರ ಶಿಕ್ಷಣಾಧಿಕಾರಿ, ಸೋಮವಾರ ಪೇಟೆ ತಾಲ್ಲೂಕು, ಕೊಡಗು ಜಿಲ್ಲೆ ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಇಲಾಖಾ ವಿಚಾರಣೆ ನಡೆಸಲು ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ಉಪ ನಿಬಂಧಕರು, ವಿಚಾರಣೆಗಳು–1, ಕರ್ನಾಟಕ ಲೋಕಾಯುಕ್ತ, ಬೆಂಗಳೂರು. ಇವರ ಅ.ಸ. ಪತ್ರ No. COMPT/UPLOK/MYS_2123/2012/DRE-1, ದಿನಾಂಕ : 12–10–2012.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 12–10–2012ರ ಅರೆ ಸರ್ಕಾರಿ ಪತ್ರದಲ್ಲಿ ಉಪ ನಿಬಂಧಕರು, ವಿಚಾರಣೆಗಳು–1, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ದಿನಾಂಕ : 10–10–2012 ರಂದು ಮಾನ್ಯ ಉಪ ಲೋಕಾಯುಕ್ತ ರವರು 1984ರ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ–12(3) ರಡಿ ನೀಡಿರುವ ಮೂಲ ವರದಿಯನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕಳುಹಿಸಿರುತ್ತಾರೆ. ಸದರಿ ವರದಿಯಲ್ಲಿ ಆಪಾದಿತರಾದ ಶ್ರೀ ಬಿ.ಕೆ. ಶಿವಣ್ಣ, ಕ್ಷೇತ್ರ ಶಿಕ್ಷಣಾಧಿಕಾರಿ, ಸೋಮವಾರ ಪೇಟೆ ತಾಲ್ಲೂಕು, ಕೊಡಗು ಜಿಲ್ಲೆ ಇವರು ಫಿರ್ಯಾದಿದಾರ ಶ್ರೀ ಕೆ.ಪಿ. ಜಯಕುಮಾರ್, ಶ್ರೀ ವಿಘ್ನೇಶ್ವರ ಬಾಲಿಕಾ ಪ್ರೌಢ ಶಾಲೆ, ಶನಿವಾರ ಸಂತೆ, ಇಲ್ಲಿ ಮುಖ್ಯ ಶಿಕ್ಷಕರಾಗಿ ಕರ್ತವ್ಯ ನಿರ್ವಹಿಸಿಕೊಂಡಿರುತ್ತಾರೆ. ಸದರಿ ಶಾಲೆಯು 2009ರ ಅಕ್ಟೋಬರ್ ತಿಂಗಳಿನಲ್ಲಿ ಅನುದಾನಿತ ಶಾಲೆಯಾಗಿ ಸರ್ಕಾರದಿಂದ ಆದೇಶವಾಗಿದ್ದು, ನಂತರ ಶಾಲೆಯ ಶಿಕ್ಷಕರ ಮತ್ತು ಸಿಬ್ಬಂದಿ ವರ್ಗದವರ ವೇತನ ಇತ್ಯಾದಿಗಳು ಸರ್ಕಾರದ ವೇತನಾನುದಾನಕ್ಕೆ ಒಳಪಟ್ಟಿತ್ತು. ಆದರಂತೆ ಶಾಲೆಯ ಮುಖ್ಯೋಪಾಧ್ಯಾಯರು ಸೇರಿದಂತೆ 7 ಜನ ಶಿಕ್ಷಕ ವರ್ಗ ಮತ್ತು ಒಬ್ಬ ಶಿಕ್ಷಕೇತರ ಸಿಬ್ಬಂದಿಯವರ 2009ರ ಅಕ್ಟೋಬರ್‌ನಿಂದ 2010ರ ಫೆಬ್ರವರಿ ತಿಂಗಳವರೆಗಿನ ವೇತನದ ಬಿಲ್ಲನ್ನು ಸೋಮವಾರಪೇಟೆ ಕ್ಷೇತ್ರ ಶಿಕ್ಷಣಾಧಿಕಾರಿಯವರ ಕಛೇರಿಗೆ ಸಲ್ಲಿಸಿದ್ದು ಅದಕ್ಕೆ ಮಂಜೂರಾತಿ ಸಹಿಯನ್ನು ಮಾಡಲು ಸೋಮವಾರಪೇಟೆ ಕ್ಷೇತ್ರ ಶಿಕ್ಷಣಾಧಿಕಾರಿಯವರಾದ ಆರೋಪಿತ ಶ್ರೀ ಬಿ.ಕೆ. ಶಿವಣ್ಣರವರು ಫಿರ್ಯಾದಿಯವರಿಂದ ₹. 50,000/– ಲಂಚದ ಹಣವನ್ನು ಕೇಳಿ ಪಡೆದುಕೊಂಡಿದ್ದರು. ನಂತರ ನವೆಂಬರ್ 2010ನೇ ಮಾಹೆಯಲ್ಲಿ ಸರ್ಕಾರವು ಮಂಜೂರು ಮಾಡಿದ ತುಟ್ಟಿಭತ್ಯೆಯ ಹಿಂಬಾಕಿ ಬಿಲ್ಲನ್ನು ತಯಾರಿಸಿ ಸಹಿ ಬಿಟ್ಟು ಆರೋಪಿತರ ಕಛೇರಿಗೆ ಸಲ್ಲಿಸಿದ್ದು ಈ ಬಿಲ್ಲಿಗೆ ಸಹ ಮಂಜೂರಾತಿ ಸಹಿ ಮಾಡಲು ಆರೋಪಿತರು ₹. 10,000/– ಲಂಚದ ಹಣವನ್ನು ಕೊಡುವಂತೆ ಫಿರ್ಯಾದಿಯವರನ್ನು ಒತ್ತಾಯಿಸಿದ್ದು ಲಂಚದ ಹಣವನ್ನು ಕೊಟ್ಟು ಸಹಿ ಮಾಡಿಸಿಕೊಳ್ಳಲು ಇಷ್ಟವಿಲ್ಲದ ಫಿರ್ಯಾದಿಯವರು ಆರೋಪಿತರ ವಿರುದ್ಧ ಸೂಕ್ತ ಕಾನೂನಿನ ಕ್ರಮ ಕೈಗೊಳ್ಳುವಂತೆ ಕೋರಿ ದಿನಾಂಕ : 5–12–2010 ರಂದು ಮಡಿಕೇರಿ ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆಗೆ ಭೇಟಿ ನೀಡಿ ದೂರು ನೀಡಿರುತ್ತಾರೆ.

ಆದರೆ ಫಿರ್ಯಾದಿದಾರರು ಲಂಚವನ್ನು ನೀಡಲು ಮನಸ್ಸಿಲ್ಲದ ಕಾರಣ ಪೊಲೀಸ್ ಇನ್‌ಸ್ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಮಡಿಕೇರಿ ಇವರಲ್ಲಿ ದಿನಾಂಕ : 15–12–2010 ರಂದು ದೂರನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಕರ್ನಾಟಕ ಲೋಕಾಯುಕ್ತ ಪೊಲೀಸ್, ಮಡಿಕೇರಿ ಠಾಣೆಯಲ್ಲಿ 05/2010 ರಲ್ಲಿ ಲಂಚ ಪ್ರತಿಬಂಧಕ ಕಾಯ್ದೆ 1988ರ ಕಲಂ–7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ಫಿರ್ಯಾದನ್ನು ಸ್ವೀಕರಿಸಿ ಕೇಸನ್ನು ದಾಖಲು ಮಾಡಿ ತನಿಖೆ ಕೈಗೊಂಡಿರುತ್ತಾರೆ.

ದಿನಾಂಕ : 15–12–2010ರ ಸುಮಾರು ಮಧ್ಯಾಹ್ನ 1.50ರ ವೇಳೆಯಲ್ಲಿ ಫಿರ್ಯಾದುದಾರರಿಂದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಸೋಮವಾರ ಪೇಟೆ, ಇಲ್ಲಿ ಆಪಾದಿತ ಅಧಿಕಾರಿಯು ನೆರಳು ಸಾಕ್ಷಿ ಪಂಚ ನಂ. 2 ಶ್ರೀ ಹೆಚ್.ಆರ್. ನಾಗರಾಜು, ಇವರು ನೋಡುತ್ತಿದ್ದಂತೆ ಫಿರ್ಯಾದಿದಾರ ಶ್ರೀ ಕೆ.ಪಿ. ಜಯಕುಮಾರ್ ಇವರಿಂದ ಲಂಚದ ಹಣ ₹. 10,000/– ಗಳನ್ನು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಹಾಗೂ ಸದರಿ ಹಣವನ್ನು ತನಿಖಾಧಿಕಾರಿಗಳು ವಶಪಡಿಸಿಕೊಂಡಿರುತ್ತಾರೆ. ಈ ಸಂಬಂಧ ಆಪಾದಿತರು ಸಮಂಜಸ ಉತ್ತರ ನೀಡುವಲ್ಲಿ ವಿಫಲರಾಗಿರುತ್ತಾರೆಯೆಂದು ತನಿಖಾಧಿಕಾರಿಗಳು ವರದಿ ಮಾಡಿರುತ್ತಾರೆ.

ಮೇಲಿನ ಆಪಾದಿತರು ಫಿರ್ಯಾದುದಾರನಿಂದ ದಿನಾಂಕ : 15–12–2010 ರಂದು ಅಕ್ರಮ ಸಂಭಾವನೆಯನ್ನು ಪಡೆಯುತ್ತಿದ್ದಾಗ ಕರ್ನಾಟಕ ಲೋಕಾಯುಕ್ತ ಪೊಲೀಸ್, ಮಡಿಕೇರಿರವರು ಬೀಸಿದ ಬಲೆಗೆ ಸಿಕ್ಕಿಬಿದ್ದಿದ್ದಾರೆ ಎಂಬ ಆರೋಪವು ತನಿಖೆಯಿಂದ, ಸಾಕ್ಷ್ಯಾಧಾರಗಳಿಂದ ಹಾಗೂ ರಾಸಾಯನಿಕ ಪರೀಕ್ಷೆಯಿಂದ ಮೇಲು ನೋಟಕ್ಕೆ ಸಾಬೀತು ಆಗಿರುವುದರಿಂದ ಆರೋಪಿತರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು 1966ರ ನಿಯಮ 3(1)ರ ಪ್ರಕಾರ ದುರ್ನಡತೆ ಎಸಗಿದ್ದಾರೆ. ಅವರ ವಿರುದ್ಧ ಶಿಸ್ತುಕ್ರಮ ಕೈಗೊಳ್ಳುವಂತೆ ಮತ್ತು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ)ರ ಅನ್ವಯ ವಿಚಾರಣೆ ನಡೆಸಲು ಪ್ರಕರಣವನ್ನು ಸಕ್ಷಮ ಪ್ರಾಧಿಕಾರಕ್ಕೆ ವಹಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲು ತೀರ್ಮಾನಿಸಿ ಅದರಂತೆ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 4 ಡಿಜಿಪಿ 2011, ಬೆಂಗಳೂರು, ದಿನಾಂಕ : 07ನೇ ಜನವರಿ, 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಬಿ.ಕೆ. ಶಿವಣ್ಣ, ಕ್ಷೇತ್ರ ಶಿಕ್ಷಣಾಧಿಕಾರಿ, ಸೋಮವಾರ ಪೇಟೆ ತಾಲ್ಲೂಕು, ಕೊಡಗು ಜಿಲ್ಲೆ ಇವರ ವಿರುದ್ಧ ದಾಖಲಾದ ಲಂಚ ನಿರೋಧಿ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸಲು ಈ ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ)ರನ್ವಯ ಮಾನ್ಯ ಉಪ ಲೋಕಾಯುಕ್ತರು–1 ಕರ್ನಾಟಕ ಲೋಕಾಯುಕ್ತ ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶ್ರೀಪಾದು ಹೆಚ್.ಎನ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸಮಿತಿಗಳು).

**P.R. 60**

## ಕಂದಾಯ ಸಚಿವಾಲಯ

**ವಿಷಯ:** ಮಡಿಕೇರಿ ತಾಲ್ಲೂಕು, ಮಡಿಕೇರಿ ಹೋಬಳಿಯ ಕೆ.ಬಾಡಗ ಗ್ರಾಮದ ಸ.ನಂ. 86/67 ರ 3.05 ಎ/ಗುಂ. ಮತ್ತು 87/18 ರ 1.88 ಎಕರೆ ಜಮೀನನ್ನು ಕೇಂದ್ರೀಯ ವಿದ್ಯಾಲಯಕ್ಕೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 46 ಎಲ್‌ಜಿಪಿ 2010, ದಿನಾಂಕ : 1–3–2011.

2. ಸರ್ಕಾರದ ಸೇರ್ಪಡೆ ಆದೇಶ ಸಂಖ್ಯೆ : ಆರ್‌ಡಿ 22 ಎಲ್‌ಜಿಪಿ 2011, ದಿನಾಂಕ: 22–3–2011.

3. ಜಿಲ್ಲಾಧಿಕಾರಿಗಳು, ಮಡಿಕೇರಿ ಇವರ ಪತ್ರ ಸಂಖ್ಯೆ: ಜಾಗ(1) ಮಂಜೂರಾತಿ/13/2006–07, ದಿನಾಂಕ : 17–8–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶ ದಿನಾಂಕ: 1–3–2011 ಮತ್ತು ಕ್ರಮ ಸಂಖ್ಯೆ (2)ರ ಸೇರ್ಪಡೆ ದಿನಾಂಕ : 22–3–2011 ರಲ್ಲಿ ಮಡಿಕೇರಿ ತಾಲ್ಲೂಕು, ಮಡಿಕೇರಿ ಹೋಬಳಿ, ಕೆ.ಬಾಡಗ ಗ್ರಾಮದ ಸ.ನಂ. 86/67ರ 3.05 ಎಕರೆ/ಗುಂಟೆ ಮತ್ತು 87/18ರ 1.88 ಎಕರೆ ಜಮೀನನ್ನು ಕೇಂದ್ರೀಯ ವಿದ್ಯಾಲಯಕ್ಕೆ ಉಚಿತವಾಗಿ ಮಂಜೂರು ಮಾಡಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ದಿನಾಂಕ : 17–8–2012ರ ಜಿಲ್ಲಾಧಿಕಾರಿಗಳು, ಮಡಿಕೇರಿ ಇವರ ಪತ್ರದಲ್ಲಿ ಮಡಿಕೇರಿ ತಾಲ್ಲೂಕು, ಮಡಿಕೇರಿ ಹೋಬಳಿ, ಕೆ.ನಿಡುಗಣೆ ಗ್ರಾಮದ ಸ.ನಂ. 1/11 ರಲ್ಲಿ 4.60 ಎಕರೆ ಜಮೀನನ್ನು ಕೇಂದ್ರೀಯ ವಿದ್ಯಾಲಯಕ್ಕೆ ಉಚಿತವಾಗಿ ಮಂಜೂರು ಮಾಡಲಾಗಿತ್ತು. ಈ ಮಧ್ಯೆ ವಿದ್ಯಾರ್ಥಿ ಪೋಷಕರ ಸಂಘ, ಕೇಂದ್ರೀಯ ವಿದ್ಯಾಲಯ, ಕೊಡಗು ಇವರು ಮನವಿ ಸಲ್ಲಿಸಿ ಪ್ರಸ್ತುತ ಮಂಜೂರಾಗಿರುವ ಜಾಗ ಮಡಿಕೇರಿಯಿಂದ 8. ಕಿ.ಮೀ. ದೂರದಲ್ಲಿದ್ದು ಸರಿಯಾದ ರಸ್ತೆಗಳು ಇರುವುದಿಲ್ಲ. ಸಾರಿಗೆ ಸಂಪರ್ಕ ಇರುವುದಿಲ್ಲ. ಹಾಗೂ ಕಾಡಿನ ಮಧ್ಯದಲ್ಲಿದ್ದು, ವಿದ್ಯಾರ್ಥಿಗಳ ಭದ್ರತೆಯ ದೃಷ್ಟಿಯಿಂದ ಸ್ಥಳ ಸೂಕ್ತವಾಗಿರುವುದಿಲ್ಲ. ಆದ್ದರಿಂದ ಮಡಿಕೇರಿ ತಾಲ್ಲೂಕು, ಮಡಿಕೇರಿ ಹೋಬಳಿ, ಕೆ.ಬಾಡಗ ಗ್ರಾಮದ ಸ.ನಂ. 86/67ರ 3.05 ಎಕರೆ/ಗುಂಟೆ ಮತ್ತು 87/18ರ 1.88 ಎಕರೆ ಒಟ್ಟು 4.93 ಎಕರೆ/ಸೆಂಟ್ಸ್ ಜಮೀನನ್ನು ಮಂಜೂರು ಮಾಡಲು ಕೋರಿರುತ್ತಾರೆ. ಆದ್ದರಿಂದ ಈಗಾಗಲೇ ದಿನಾಂಕ : 23–3–2011ರಲ್ಲಿ ಕೆ.ಬಾಡಗ ಗ್ರಾಮದ ಸ.ನಂ. 86/67 ರ 3.05 ಎಕರೆ/ಗುಂಟೆ ಮತ್ತು 87/18 ರ 1.88 ಎಕರೆ ಜಮೀನನ್ನು ಕೇಂದ್ರೀಯ ವಿದ್ಯಾಲಯಕ್ಕೆ ಉಚಿತವಾಗಿ ಮಂಜೂರು ಮಾಡಿರುವುದಕ್ಕೆ ಬದಲಿಯಾಗಿ ಮಡಿಕೇರಿ ತಾಲ್ಲೂಕು, ಮಡಿಕೇರಿ ಹೋಬಳಿ, ಕೆ.ನಿಡುಗಣೆ ಗ್ರಾಮದ ಸ.ನಂ. 1/1 ರಲ್ಲಿ 4.60 ಎಕರೆ ಜಮೀನನ್ನು ಕೇಂದ್ರೀಯ ವಿದ್ಯಾಲಯಕ್ಕೆ ಉಚಿತವಾಗಿ ಮಂಜೂರು ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 44 ಎಲ್‌ಜಿಪಿ 2012, ಬೆಂಗಳೂರು, ದಿನಾಂಕ : 28–12–2012.**

ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 46 ಎಲ್‌ಜಿಪಿ 2010, ದಿನಾಂಕ : 1–3–2011 ಹಾಗೂ ಸೇರ್ಪಡೆ ಸಂಖ್ಯೆ : ಆರ್‌ಡಿ 46 ಎಲ್‌ಜಿಪಿ 2010, ದಿನಾಂಕ : 23–3–2011ರಲ್ಲಿ ಮಡಿಕೇರಿ ತಾಲ್ಲೂಕು ಕೆ.ನಿಡುಗಣೆ ಗ್ರಾಮದ ಸ.ನಂ. 1/11 ರಲ್ಲಿ 4.60 ಎಕರೆ ಜಮೀನು ಕೇಂದ್ರೀಯ ವಿದ್ಯಾಲಯಕ್ಕೆ ಮಾಡಿದ ಜಮೀನು ಮಂಜೂರಾತಿ ಮಾತ್ರ ರದ್ದುಗೊಳಿಸಿ ಮಡಿಕೇರಿ ತಾಲ್ಲೂಕು, ಮಡಿಕೇರಿ ಹೋಬಳಿ, ಕೆ.ಬಾಡಗ ಗ್ರಾಮದಲ್ಲಿ ಸ.ನಂ. 86/67 ರಲ್ಲಿ 3.05 ಎಕರೆ/ಸೆಂಟ್ಸ್, ಸ.ನಂ. 87/68 ರಲ್ಲಿ 1–88 ಎಕರೆ/ಸೆಂಟ್ಸ್, ಒಟ್ಟು 4–93 ಎಕರೆ/ಸೆಂಟ್ಸ್ ಜಮೀನನ್ನು ಬದಲಿಯಾಗಿ ಈ ಹಿಂದೆ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳೊಂದಿಗೆ ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–1).

**P.R. 61**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಕೋಟನೂರ–ಡಿ ಹೊಸ ವಸತಿ ಬಡಾವಣೆಯನ್ನು ಅಭಿವೃದ್ಧಿ ಪಡಿಸಲು ರೂ. 15750.00 ಲಕ್ಷಗಳ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ ಗುಲ್ಬರ್ಗಾ ಇವರ ಪತ್ರ ಸಂಖ್ಯೆ : ನಪ್ರಾಗು/ತಾಂತ್ರಿಕ/ಕೊಟನೂರು–ಡಿ/ನೂ.ಯೋಜನೆ/ 2011–12/5628/ದಿನಾಂಕ : 21–12–2011 ಮತ್ತು 6021/ದಿನಾಂಕ : 17–2–2012 ಹಾಗೂ 684, ದಿನಾಂಕ : 24–7–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರಗಳಲ್ಲಿ ಆಯುಕ್ತರು, ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರ ರವರು ಗುಲ್ಬರ್ಗಾ ನಗರದಿಂದ ಜೇವರಿಗಿಗೆ ಹೋಗುವ ಮುಖ್ಯ ರಸ್ತೆಗೆ ಹೊಂದಿಕೊಂಡಿರುವ ಕೋಟನೂರ–ಡಿ ಗ್ರಾಮದ ಸರ್ವೆ ನಂ. 49, 66. 67, 68, 74, 76, 77, 96, 97 ರಲ್ಲಿ ಒಟ್ಟು 157 ಎಕರೆ 10 ಗುಂಟೆ ಜಮೀನಿನನ್ನು ಭೂ ಸ್ವಾಧೀನ ಕಾಯ್ದೆಯನ್ವಯ ಸ್ವಾಧೀನ ಪಡಿಸಿಕೊಂಡಿದ್ದು, ಸದರಿ ಪ್ರದೇಶದಲ್ಲಿ ಸುಮಾರು 2040 ವಿವಿಧ ಅಳತೆಗಳ ನಿವೇಶನಗಳನ್ನು ಅಂದಾಜು ರೂ. 15750–00 ಲಕ್ಷಗಳಲ್ಲಿ ಅಭಿವೃದ್ಧಿ ಪಡಿಸಲು ಅಂದಾಜು ಪಟ್ಟಿಯನ್ನು ತಯಾರಿಸಿ ಸರ್ಕಾರಕ್ಕೆ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಯೋಜನೆಯ ನಿವೇಶನಗಳ ಶೇಕಡ 30 ರಷ್ಟು 6/9 ಮೀಟರ್ ಅಳತೆಯ ನಿವೇಶನಗಳನ್ನು ರಚಿಸಲು ಇವುಗಳ ಪೈಕಿ ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಶೇಕಡ 75 ರಷ್ಟು ಹಾಗೂ ಆರ್ಥಿಕವಾಗಿ ಹಿಂದುಳಿದ ವರ್ಗಗಳಿಗೆ ಶೇಕಡ 50ರಷ್ಟು ದರದಲ್ಲಿ ರಿಯಾತಿಯನ್ನು ನೀಡಲು ಯೋಜಿಸಲಾಗಿದೆ ಎಂದು ಆಯುಕ್ತರು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ಈ ಯೋಜನೆಯಡಿಯಲ್ಲಿ ಸುಮಾರು 168 ಎಕರೆ ಪ್ರದೇಶದಲ್ಲಿ ಮೂರು ಹಂತಗಳಲ್ಲಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1976 ನಿಯಮ 15(1) ರನ್ವಯ ಸರ್ಕಾರದ ಪ್ರಾಥಮಿಕ ಅನುಮೋದನೆಯನ್ನು ದಿನಾಂಕ : 12–6–2003ರಲ್ಲಿ ನೀಡಲಾಗಿದೆ. ಇದಲ್ಲದೆ ಪ್ರಾಧಿಕಾರವು ಸದರಿ ಕಾಯ್ದೆಯ ನಿಯಮ 16ರಲ್ಲಿ ನಕ್ಷೆಯನ್ನು ತಯಾರಿಸಿ ನಿಯಮ 17ರನ್ವಯ ಭೂ ಉಪಯೋಗ ಪಡಿಸಿಕೊಳ್ಳಲು ಸಹ ಅನುಮೋದನೆಯನ್ನು ನೀಡಲಾಗಿದೆ.

ಪ್ರಾಧಿಕಾರವು ದಿನಾಂಕ : 23–4–2012 ರಂದು ನಡೆದ ಸಭೆಯ ವಿಷಯ ಸಂಖ್ಯೆ : 02 ರಲ್ಲಿ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲು ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಲು ನಿರ್ಣಯಿಸಿರುತ್ತದೆ. ಈ ಯೋಜನೆಗೆ ಅಗತ್ಯವಿರುವ ಭೂಮಿಯನ್ನು ಜಿಲ್ಲಾಧಿಕಾರಿಗಳು ಗುಲ್ಬರ್ಗಾರವರು ಕರ್ನಾಟಕ ಭೂ ಸ್ವಾಧೀನ ಕಾಯ್ದೆ ಕಲಂ 4 (1) ರಡಿಯಲ್ಲಿ ದಿನಾಂಕ : 2–7–2007 ರಂದು ಅಧಿಸೂಚನೆ ಹೊರಡಿಸಿ ಸಹಾಯಕ ಆಯುಕ್ತರು ಗುಲ್ಬರ್ಗಾರವರನ್ನು ಜಿಲ್ಲಾಧಿಕಾರಿಗಳ ಪ್ರಕಾರ್ಯವನ್ನು ನಿರ್ವಹಿಸಲು ನೇಮಕ ಮಾಡಿ ಭೂ ಸ್ವಾಧೀನ ಕಾಯ್ದೆ 1894 ಕಲಂ 6(1) ರಡಿಯಲ್ಲಿ ಕ್ರಮವಹಿಸಿ ಭೂ ಪರಿಹಾರ ಮೊತ್ತವನ್ನು ಪ್ರತಿ ಎಕರೆಗೆ ರೂ. 1,98,000 ರಂತೆ ಭೂ ಮಾಲೀಕರಿಗೆ ಪರಿಹಾರ ಧನವನ್ನಾಗಿ ಪಾವತಿಸಲಾಗಿದ್ದು, ಸದರಿ ಜಮೀನುಗಳಲ್ಲಿ ಬರುವ ಬಾವಿ, ಕೊಳವೆಬಾವಿ, ಕಟ್ಟಡ, ಗಿಡ ಮರಗಳ ಬೆಲೆಯನ್ನು ಸಹ ಭೂ ಮಾಲೀಕರಿಗೆ ಸಂದಾಯ ಮಾಡಲು ಭೂ ಸ್ವಾಧೀನಾಧಿಕಾರಿಗಳು ಗುಲ್ಬರ್ಗಾ ಇವರಲ್ಲಿ ಠೇವಣಿ ಮಾಡಿ ದಿನಾಂಕ : 23–10–2010 ರಂದು ಐತೀರ್ಪು ಘೋಷಿಸಲಾಗಿದೆ. ಅದರಂತೆ ಸದರಿ ಜಮೀನುಗಳ ಪಹಣಿ ಪತ್ರಿಕೆಯಲ್ಲಿ ಪ್ರಾಧಿಕಾರದ ಹೆಸರಿಗೆ ವರ್ಗಾವಣೆ ಮಾಡಿಸಿಕೊಳ್ಳಲಾಗಿದೆ ಎಂದು ಆಯುಕ್ತರ ಪ್ರಸ್ತಾವನೆಯಲ್ಲಿ ಸರ್ಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಈ ಯೋಜನೆಗೆ ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರದ 2011–12ನೇ ಸಾಲಿನ ಆಯವ್ಯಯದಲ್ಲಿ ರೂ. 5.00 ಕೋಟಿ ಮೊತ್ತವನ್ನು ಕಾಯ್ದಿರಿಸಲಾಗಿದ್ದು, ಯೋಜನೆಯ ವೆಚ್ಚವನ್ನು ಭರಿಸಲು ಪ್ರಾಧಿಕಾರದಲ್ಲಿ ಲಭ್ಯವಿದ್ದ ಹಣದ ಶಿಲ್ಕಿನಲ್ಲಿ ಅಂದಾಜು ರೂ. 25.00 ಕೋಟಿಯ ಅಭಿವೃದ್ಧಿ ಕಾಮಗಾರಿಗಳನ್ನು ಹಂತ ಹಂತವಾಗಿ ತೆಗೆದುಕೊಳ್ಳಲು ಉದ್ದೇಶಿಸಲಾಗಿದೆ. ಇದಲ್ಲದೆ ಗುಲ್ಬರ್ಗಾ ನಗರ ಸ್ಥಳೀಯ ಪ್ರದೇಶದ ಮಹಾಯೋಜನೆಯಲ್ಲಿ (ಪರಿಷ್ಕೃತ–II) ಪ್ರಸ್ತಾವಿತ ಉದ್ಯಾನವನ ಮತ್ತು ಬಯಲು ಜಾಗದ ಪ್ರದೇಶಗಳನ್ನು ಭೂ ಸ್ವಾಧೀನಪಡಿಸಿಕೊಳ್ಳಲು ರೂ. 250.00 ಲಕ್ಷಗಳನ್ನು ಕಾಯ್ದಿರಿಸಲಾಗಿದ್ದು, ಇದರೊಂದಿಗೆ ಪ್ರಾಧಿಕಾರದಲ್ಲಿ ರೂ. 27.00 ಲಕ್ಷ ಮೊತ್ತವು ಉದ್ಯಾನವನ ಮತ್ತು ಬಯಲು ಜಾಗದ ಭೂ ಸ್ವಾಧೀನತೆಗಾಗಿ ಕಾಯ್ದಿರಿಸಲಾಗಿದೆ. ಇದರೊಂದಿಗೆ ಸದರಿ ಯೋಜನೆಯಲ್ಲಿ ನಿವೇಶನ ಹಂಚಿಕೆಗಾಗಿ ಅರ್ಜಿಗಳನ್ನು ಕರೆದಾಗ ಅವುಗಳಿಂದ ಮುಂಗಡ ಠೇವಣಿ ಹಾಗೂ ನಿವೇಶನಗಳನ್ನು ಹಂಚಿದಾಗ ನಿವೇಶನದಾರರಿಂದ ಬರುವ ಹಣದಲ್ಲಿ ಅಭಿವೃದ್ಧಿ ಕಾಮಗಾರಿಯನ್ನು ಹಂತ ಹಂತವಾಗಿ ತೆಗೆದುಕೊಳ್ಳಬಹುದಾಗಿದೆ.

ಈ ಯೋಜನೆಯಲ್ಲಿನ ಸಿವಿಲ್ ಕಾಮಗಾರಿಗಳ ಅಂದಾಜು ಪತ್ರಿಕೆಗಳನ್ನು 2011–12ನೇ ಸಾಲಿನ ಗುಲ್ಬರ್ಗಾ ವೃತ್ತದ ಲೋಕೋಪಯೋಗಿ ದರಪಟ್ಟಿಯನ್ನಾಧರಿಸಿ ತಯಾರಿಸಲಾಗಿದ್ದು, ಇವುಗಳಿಗೆ ಮುಖ್ಯ ಇಂಜಿನಿಯರ್ (ಉತ್ತರ) ಧಾರವಾಡ ರವರಿಂದ ತಾಂತ್ರಿಕ ಅನುಮೋದನೆಯನ್ನು ಪಡೆಯಲಾಗಿದೆ. ಮತ್ತು ನೀರು ಸರಬರಾಜು ಮತ್ತು ಒಳಚರಂಡಿಗೆ ಸಂಬಂಧಿಸಿದಂತೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ವಿಭಾಗರವರಿಂದ ರೇಖಾ ಅಂದಾಜು ಪಡೆಯಲಾಗಿದ್ದು, ವಿದ್ಯುತ್ತೀಕರಣಕ್ಕೆ ಕಾರ್ಯನಿರ್ವಾಹಕ ಅಭಿಯಂತರರು (ವಿ) ಕಾರ್ಯ ಮತ್ತು ಪಾಲನೆ ಇವರಿಂದ ಸಹ ರೇಖಾ ಅಂದಾಜು ಪಡೆಯಲಾಗಿದೆ.

ಪ್ರಾಧಿಕಾರವು ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ರೂ. 15750.00 ಲಕ್ಷಗಳ ಯೋಜನಾ ವೆಚ್ಚಗಳನ್ನು ಗುರುತಿಸಿದ್ದು ಸದರಿ ಯೋಜನಾ ವೆಚ್ಚವನ್ನು ಪರಿಶೀಲಿಸಲಾಗಿ ಈ ಕೆಳಕಂಡಂತೆ ವಿಂಗಡಿಸಿ ರೂ. 14700.00 ಲಕ್ಷಗಳಿಗೆ ಮಿತಿಗೊಳಿಸಲಾಗಿದೆ.

| | | | |
|---|---|---|---|
| 1. | ಭೂ ಸ್ವಾಧೀನ ವೆಚ್ಚ | : | ರೂ. 6126.20 ಲಕ್ಷಗಳು |
| 2. | ಭೂಮಿ ಮಟ್ಟ ಮಾಡಲು | : | ರೂ. 250.00 ಲಕ್ಷಗಳು |
| 3. | ಕಾಂಪೌಂಡ್ ಕಾಮಗಾರಿಗಳು | : | ರೂ. 13.30 ಲಕ್ಷಗಳು |
| 4. | ರಸ್ತೆ ಕಾಮಗಾರಿಗಳಿಗಾಗಿ | : | ರೂ. 970.00 ಲಕ್ಷಗಳು |
| 5. | ಚರಂಡಿ ನಿರ್ಮಾಣ | : | ರೂ. 1775.00 ಲಕ್ಷಗಳು |
| 6. | ಉದ್ಯಾನವನಗಳಿಗೆ ಕಾಪೌಂಡ್ ಗೋಡೆ | : | ರೂ. 500.00 ಲಕ್ಷಗಳು |
| 7. | ನೀರು ಸರಬರಾಜು ವ್ಯವಸ್ಥೆಗಾಗಿ | : | ರೂ. 796.00 ಲಕ್ಷಗಳು |
| 8. | ಒಳಚರಂಡಿ ವ್ಯವಸ್ಥೆಗಾಗಿ | : | ರೂ. 460.00 ಲಕ್ಷಗಳು |
| 9. | ವಿದ್ಯುತ್ ಕಾಮಗಾರಿಗಳಿಗಾಗಿ | : | ರೂ. 1000.00 ಲಕ್ಷಗಳು |
| | | | **ರೂ. 11890.50 ಲಕ್ಷಗಳು** |
| 10. | ಶೇ 21 ರಷ್ಟು ಆಡಳಿತಾತ್ಮಕ ವೆಚ್ಚಗಳು | : | ರೂ. 1210.65 ಲಕ್ಷಗಳು |

| | | | |
|---|---|---|---|
| 11. | ಟೆಂಡರ್ ಪ್ರೀಮಿಯಂ (ನೀರು/ಒಳಚರಂಡಿ) | : | ರೂ. 125.60 ಲಕ್ಷಗಳು |
| 12. | ಟೆಂಡರ್ ಪ್ರೀಮಿಯಂ ವಿದ್ಯುತ್ (ಶೇ 30) | : | ರೂ. 300.00 ಲಕ್ಷಗಳು |
| 13. | ಏಸ್ಕಲೇಷನ್ ಮತ್ತು ಟೆಂಡರ್ ಪ್ರೀಮಿಯಂ | : | ರೂ. 1153.00 ಲಕ್ಷಗಳು |
| 14. | ಇತರೆ ವೆಚ್ಚಗಳು | : | ರೂ. 20.25 ಲಕ್ಷಗಳು |
| | **ಒಟ್ಟು** | : | **ರೂ. 14700.00 ಲಕ್ಷಗಳು** |

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 02 ಗುಅಪ್ರಾ 2012, ಬೆಂಗಳೂರು, ದಿನಾಂಕ : 05–11–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರದಿಂದ ಕೋಟನೂರು–ಡಿ ಹೊಸ ವಸತಿ ಬಡಾವಣೆಯನ್ನು ರೂ. 14700.00 ಲಕ್ಷಗಳ (ರೂ. ಹದಿನಾಲ್ಕು ಸಾವಿರದ ಏಳುನೂರು ಲಕ್ಷಗಳು ಮಾತ್ರ) ಅಂದಾಜಿನಲ್ಲಿ ಕಲ್ಪಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. Since land has already been acquired for the Project and compensation paid by GUDA the proposal for development of 157 acres and 10 guntas at Rs. 147.00 crores for creating 2040 sites. In the method proposed for financing is very ambiguous with no clear source of funds shown and such uncertainty will only be causing time and cost overruns and several other complications. For example, an amount of Rs. 2.5 crores proposed to be used for this project is from the fund for acquiring land for park and open spaces. It is not permitted under the UDA Rules to use it for any other purpose. Hence caution may be taken to follow the procedure in accordance with the rules that are prevailing ;
2. Since GUDA has already spent Rs. 67.00 crores for land acquisition that is 46% of the project cost, no further funds of GUDA should be used and no borrowing should be resorted to for funding this project. Further it is brought to the notice that the financial burden could have been easily avoided since it was done after the rules of 60:40 were notified. Since the development of such sites and services schemes is a short-term project, it is eminently possible to involve the allottees financially from the beginning. Apart from reducing interest costs and locking in of GUDA's limited funds, this will also ensure better project discipline avoiding time cost overrun. This will also take care of the market risk for the investment made in this project. There are many examples where UDA projects have not yielded the kind of demand that was projected when projects were taken up ;
3. Therefore, it is advised that GUDA should allot the sites as per the KUDA allotment Rules upfront and create a scheme to collect amount from the allottees in two or three installments, which should be maintained in a separate project account and the same should be used for development of this project only. Any development work should be taken up only with this amount.
4. In case of default suitable action will be taken against the concerned officers and officials. The Installments for allotment of sites should be fixed as per the project timeline ;
5. While pricing sites, all the cost including possible enhancement in LAQ compensation and expected returns for the GUDA should be suitably accounted for ;
6. Sites should be priced, keeping in view the cost escalation in the future and ensuring that full recovery of the cost of the land and development charges is made ;
7. Sites so formed should be allotted as per allotment rules ;
8. Corner sites and commercial sites should be put to public auction as per rules, in order to get more revenue ;
9. Allotment of sites should be made before the development of the layout begins so that allottees can monitor the development of the layout which will avoid cost overrun ;
10. ಸದರಿ ಕಾಮಗಾರಿಯನ್ನು ನಿರ್ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಮತ್ತು ನಿಯಮ 2000ನ್ನು ಪಾಲಿಸತಕ್ಕದ್ದು ;
11. ಕಾಮಗಾರಿಗಳ ಟೆಂಡರ್‌ಗಳನ್ನು ರಾಜ್ಯ ಟೆಂಡರ್ ಬುಲೆಟಿನ್‌ನಲ್ಲಿ ಕರೆಯಲು ರಾಜ್ಯ ಟೆಂಡರ್ ಬುಲೆಟಿನ್ ಅಧಿಕಾರಿಯಿಂದ ಅನುಮೋದನೆ ಪಡೆಯತಕ್ಕದ್ದು ;
12. ಕಾಮಗಾರಿಗಳ ಗುತ್ತಿಗೆ ನೀಡುವ ಮುನ್ನ ನಿಯಮಾವಳಿಯಂತೆ ಸರ್ಕಾರದ ಅನುಮೋದನೆ ಪಡೆದು ಗುತ್ತಿಗೆಯನ್ನು ನೀಡತಕ್ಕದ್ದು;
13. ಈ ಯೋಜನೆಯಡಿ ನಿಗದಿಗೊಳಿಸಲಾದ ಟೆಂಡರ್ ಪ್ರೀಮಿಯಂ ಏಸ್ಕಲೇಷನ್ ಹಾಗೂ ಇತರೆ ಹೆಚ್ಚುವರಿ ಮೊತ್ತವನ್ನು ಮೂಲ ಅಂದಾಜು ಮೊತ್ತದಲ್ಲಿ ಸೇರಿಸತಕ್ಕದ್ದಲ್ಲ ;
14. ನೀರು ಸರಬರಾಜು/ಒಳಚರಂಡಿ ಮತ್ತು ವಿದ್ಯುತ್ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಟೆಂಡರ್‌ಗಳನ್ನು ಆಹ್ವಾನಿಸತಕ್ಕದ್ದು ;
15. ಕಾಂಪೌಂಡ್ ಸಿವಿಲ್ ಕಾಮಗಾರಿಗಳ ಪೈಕಿ ಕಾಂಪೌಂಡ್ ಕಾಮಗಾರಿಗಳನ್ನು ಅಗತ್ಯವಿದ್ದ ಸಾರ್ವಜನಿಕ ಉಪಯುಕ್ತ ಸ್ಥಳಗಳಲ್ಲಿ ಅಂದರೆ ಪಾರ್ಕ್ ಇತ್ಯಾದಿಗಳ ಅಭಿವೃದ್ಧಿಗೊಳಿಸಿದ ನಂತರ ಮಾತ್ರ ನಿರ್ಮಿಸಿ ಸ್ಥಳೀಯ ಸಂಸ್ಥೆಗೆ ಹಸ್ತಾಂತರಿಸುವ ಸಮಯದಲ್ಲಿ ನಿರ್ವಹಿಸತಕ್ಕದ್ದು ;

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 439 ವೆಚ್ಚ–9/2012, (ಆರ್.ಎಫ್. ಸಂಖ್ಯೆ:58822) ದಿನಾಂಕ: 21–9–2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

P.R. 62

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರದಿಂದ ನಿರ್ಮಿಸುತ್ತಿರುವ ಶ್ರೀಮತಿ ಹೆಚ್.ಆರ್. ಸರೋಜಮ್ಮ ವಸತಿ ಬಡಾವಣೆಯ ಪರಿಷ್ಕೃತ ಅಂದಾಜು ರೂ. 1860.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ ಕೊಪ್ಪಳ ಇವರ ಪತ್ರ ಸಂಖ್ಯೆ ಕೊನಪ್ರಾ/ಆಡಳಿತ/ ಆ.ಅನುಮೋದನೆ/ 127/2011-12 ದಿನಾಂಕ : 27-6-2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಆಯುಕ್ತರು, ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರ ರವರು ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರದಿಂದ ನಿರ್ಮಿಸುತ್ತಿರುವ ಶ್ರೀಮತಿ ಹೆಚ್.ಆರ್. ಸರೋಜಮ್ಮ ಬಡಾವಣೆಯ ವಸತಿ ಯೋಜನೆಯನ್ನು ರೂ. 1860.00 ಲಕ್ಷಗಳಿಗೆ ಪರಿಷ್ಕರಿಸಿ ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಯೋಜನೆಯನ್ನು ಸ.ನಂ. 153/1, 2 ಮತ್ತು 154/1 ರಲ್ಲಿ ಒಟ್ಟು ವಿಸ್ತೀರ್ಣ 28 ಎಕರೆ 4 ಗುಂಟೆ ಜಮೀನಿನಲ್ಲಿ ವಸತಿ ಅಭಿವೃದ್ಧಿಗಳನ್ನು ಕೈಗೊಳ್ಳಲು ಈ ಹಿಂದೆ ಸರ್ಕಾರವು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : ಎಫ್.ಡಿ 450 ಎಕ್ಸ್‌ಪಿ-9/09, ದಿನಾಂಕ : 3-8-2009 (ಆರ್.ಎಫ್. ಸಂಖ್ಯೆ: 36622) ರಲ್ಲಿ ನೀಡಿದ ಸಹಮತಿಯನ್ವಯ ಪರಿಶೀಲಿಸಿ ಯೋಜನೆಗೆ ಆಡಳಿತಾತ್ಮಕ ಅನುಮೋದನೆಯನ್ನು ಅಂದಾಜು ರೂ. 473.00 ಲಕ್ಷಗಳಲ್ಲಿ ಕೈಗೆತ್ತಿಕೊಳ್ಳಲು ಸರ್ಕಾರದ ಆದೇಶ ಸಂಖ್ಯೆ : ನಅಇ 44 ಗುಅಪ್ರಾ 2008, ದಿನಾಂಕ : 29-10-2009 ರಲ್ಲಿ ಅನುಮೋದನೆ ನೀಡಲಾಗಿತ್ತು.

ಸದರಿ ಯೋಜನೆಯ ವಿಸ್ತೀರ್ಣವನ್ನು 24 ಎಕರೆ 12 ಗುಂಟೆಗೆ ಮಿತಿಗೊಳಿಸಿ ಬಾಕಿ ಉಳಿದ 3 ಎಕರೆ 32 ಗುಂಟೆ ಹಿರೇಹಳ್ಳದ ಪ್ರದೇಶದಲ್ಲಿ ನಾಲೆಯು ಬಂದಿರುವುದರಿಂದ ಈ ಪ್ರದೇಶವನ್ನು ಕೈಬಿಡಲಾಗಿದೆ ಎಂದು ಮತ್ತು ಸದರಿ ಯೋಜನೆಯಡಿಯಲ್ಲಿ ಭೂ ಸ್ವಾಧೀನಪಡಿಸಿಕೊಂಡ ಭೂ ಮಾಲೀಕರು ಹೆಚ್ಚಿನ ಪರಿಹಾರ ಮೊತ್ತವನ್ನು ಕೋರಿ ಕರ್ನಾಟಕ ಉಚ್ಛ ನ್ಯಾಯಾಲಯ ಧಾರವಾಡ ಪೀಠ ಇಲ್ಲಿ ದಾವೆ ಹೂಡಿ ಪ್ರತಿ ಎಕರೆಗೆ ರೂ. 10.02 ಲಕ್ಷಗಳಷ್ಟು ಮೊತ್ತವನ್ನು ಪರಿಹಾರ ಮೊತ್ತವನ್ನಾಗಿ ನೀಡಲು ಆದೇಶಿಸಿದ ಮೇರೆಗೆ ಮತ್ತು ಯೋಜನಾ ಕಾಮಗಾರಿಗಳ ಅಂದಾಜು ಪಟ್ಟಿಯನ್ನು ಪ್ರಸ್ತುತ ಸಾಲಿನ ದರಪಟ್ಟಿಗೆ ಆಧರಿಸಿ ತಯಾರಿಸಿದ ಹಿನ್ನೆಲೆಯಲ್ಲಿ ಪರಿಷ್ಕೃತ ಯೋಜನೆಗೆ ಮಂಜೂರಾತಿಯನ್ನು ಕೋರಲಾಗಿದೆ ಎಂದು ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರದವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಯೋಜನೆಗಳ ಅಂದಾಜು ವೆಚ್ಚಗಳನ್ನು ಪ್ರಾಧಿಕಾರವು ಈ ಕೆಳಕಂಡಂತೆ ಸಲ್ಲಿಸಿರುತ್ತದೆ.

| | | | |
|---|---|---|---|
| 1. | ಲೋಕೋಪಯೋಗಿ ಇಲಾಖೆ ಕಾಮಗಾರಿಗಳು | : | ರೂ. 222.65 ಲಕ್ಷಗಳು |
| 2. | ಶೇ 12 ರಷ್ಟು ಸೂಪರ್‌ವಿಷನ್ ದರಗಳು | : | ರೂ. 26.71 ಲಕ್ಷಗಳು |
| 3. | ನೀರು ಸರಬರಾಜು ಮತ್ತು ಒಳಚರಂಡಿ | : | ರೂ. 112.55 ಲಕ್ಷಗಳು |
| 4. | ಶೇ 13 ರಷ್ಟು ಸೂಪರ್ ವಿಷನ್ ದರಗಳು | : | ರೂ. 14.63 ಲಕ್ಷಗಳು |
| 5. | ಜೆಸ್ಕಾಂ ಸಂಸ್ಥೆ ವಿದ್ಯುತ್ ಕಾಮಗಾರಿಗಳ ಅಂದಾಜು | : | ರೂ. 124.13 ಲಕ್ಷಗಳು |
| 6. | ಶೇ 10 ರಷ್ಟು ಸೂಪರ್‌ವಿಷನ್ ದರಗಳು | : | ರೂ. 12.41 ಲಕ್ಷಗಳು |
| 7. | ತೋಟಗಾರಿಕೆ ಅಂದಾಜು | : | ರೂ. 41.08 ಲಕ್ಷಗಳು |
| 8. | ಭೂ ಸ್ವಾಧೀನ ವೆಚ್ಚ | : | ರೂ. 600.00 ಲಕ್ಷಗಳು |
| 9. | ದರ ಪಟ್ಟಿ ಏರಿಳಿತ ವೆಚ್ಚಗಳು | : | ರೂ. 81.45 ಲಕ್ಷಗಳು |
| 10. | ಇಟಿಪಿ ಮೇಲ್ ವಿಚಾರಣೆ ಲೇಬರ್‌ಸೆಸ್ ಮತ್ತು 3ನೇ ಏಜನ್ಸಿಯ ತಪಾಸಣಾ ಶುಲ್ಕ ಮತ್ತು ಇತರೆ ಕಛೇರಿ ವೆಚ್ಚಗಳಿಗೆ | : | ರೂ. 624.39 ಲಕ್ಷಗಳು |
| | **ಒಟ್ಟು** | : | **ರೂ. 1860.00 ಲಕ್ಷಗಳು** |

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಪ್ರಾಧಿಕಾರವು ಈ ಹಿಂದೆ ಸದರಿ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಿದ ಮೊತ್ತಕ್ಕೆ ಮತ್ತು ಪ್ರಸ್ತುತ ಸಲ್ಲಿಸಿರುವ ಪರಿಷ್ಕೃತ ಅಂದಾಜು ಮೊತ್ತಕ್ಕೆ ತುಲನಾತ್ಮಕ ವಿವರಗಳನ್ನು ಈ ಕೆಳಕಂಡಂತೆ ವಿವರಿಸಿದೆ :

| ಕ್ರಮ ಸಂಖ್ಯೆ | ವಿವರ | ಪ್ರಸ್ತುತ ಸಲ್ಲಿಸಿರುವ ಪರಿಷ್ಕೃತ ಅಂದಾಜು ಮೊತ್ತ | ಆಡಳಿತಾತ್ಮಕ ಅನುಮೋದನೆಯಲ್ಲಿ ಮಂಜೂರಾದ ಮೊತ್ತ | ವ್ಯತ್ಯಾಸ |
|---|---|---|---|---|
| 1. | ರಸ್ತೆ, ಚರಂಡಿ ಇತ್ಯಾದಿ ಕಾಮಗಾರಿಗಳು | 222.65 | 156.74 | 65.91 |
| 2. | ನೀರು ಸರಬರಾಜು ವ್ಯವಸ್ಥೆ ಕಲ್ಪಿಸಲು | 112.55 | 66.80 | 45.75 |
| 3. | ವಿದ್ಯುತ್ ಸಂಪರ್ಕ ನೀಡಲು | 124.12 | 113.22 | 10.90 |
| 4. | ಭೂ ಸ್ವಾಧೀನ ವೆಚ್ಚ | 600.00 | 136.24 | 463.76 |
| | **ಒಟ್ಟು ವ್ಯತ್ಯಾಸ** | **1059.32** | **473.00** | **586.32** |

ಮೇಲೆ ವಿವರಿಸಿರುವ ಅಂಶಗಳ ಪೈಕಿ ಪರಿಷ್ಕೃತ ಯೋಜನೆ ಪ್ರಸ್ತಾವನೆಯು ಮೂಲ ಅಂದಾಜು ಪ್ರಸ್ತಾವನೆಗಿಂತ ಶೇ. 400 ರಷ್ಟು ಅಧಿಕವಾಗಿರುತ್ತದೆ. ಸದರಿ ಪರಿಷ್ಕೃತ ಪ್ರಸ್ತಾವನೆಯಲ್ಲಿ ಯೋಜನೆಗಳ ಮೇಲೆ ಸೂಪರ್‌ವಿಷನ್ ದರಗಳು. ಇ.ಟಿ.ಪಿ. ಟೆಂಡರ್ ಪ್ರೀಮಿಯಂ, ಮೇಲ್ ವಿಚಾರಣೆ, ಲೇಬರ್‌ಸೆಸ್ ಮತ್ತು 3ನೇ ಏಜನ್ಸಿಯ ತಪಾಸಣಾ ಶುಲ್ಕ ಮತ್ತು ಇನ್ನಿತರೆ ವೆಚ್ಚಗಳನ್ನು ಕಾಮಗಾರಿಗಳ ಬಿಲ್ಲುಗಳಲ್ಲಿ ನಿಯಮಾವಳಿಯಂತೆ ವಿಧಿಸಬೇಕಾಗಿರುವ ದರಗಳನ್ನು ಮತ್ತು ತೆರಿಗೆಗಳನ್ನು ಹಾಗೂ ಕಡಿತಗೊಳಿಸಬೇಕಾಗಿರುವ ರಾಯಲ್ಟಿ ಇತ್ಯಾದಿ ಕಡಿತಗಳನ್ನು ಸಾಮಾನ್ಯವಾಗಿ ಸೇರಿಸಿ/ಕಡಿತಗೊಳಿಸಿ ತಯಾರಿಸಲಾಗುತ್ತದೆ. ಆದ್ದರಿಂದ ಸದರಿ ವೆಚ್ಚಗಳನ್ನು ಮೂಲ ಅಂದಾಜು ಮೊತ್ತದಲ್ಲಿ ಸೇರಿಸಿದ ಪಕ್ಷದಲ್ಲಿ ಅಂದಾಜು ಮೊತ್ತವು ಅಧಿಕವಾಗುತ್ತದೆ. ಆದ್ದರಿಂದ ಪ್ರಸ್ತುತ ಪ್ರಾಧಿಕಾರವು ಸಲ್ಲಿಸಿರುವ ರೂ. 1860.00 ಲಕ್ಷಗಳ ಪ್ರಸ್ತಾವನೆಯನ್ನು ರೂ. 1060.00 ಲಕ್ಷಗಳಿಗೆ ಮಿತಿಗೊಳಿಸಲಾಗಿದೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 50 ಗುಅಪ್ರಾ 2012, ಬೆಂಗಳೂರು, ದಿನಾಂಕ : 5–11–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರದಿಂದ ನಿರ್ಮಿಸುತ್ತಿರುವ ಶ್ರೀಮತಿ ಹೆಚ್.ಆರ್. ಸರೋಜಮ್ಮ ವಸತಿ ಬಡಾವಣೆಯ ಅಂದಾಜನ್ನು ರೂ. 473.00 ಲಕ್ಷಗಳಿಂದ ರೂ. 1060.00 ಲಕ್ಷಗಳಿಗೆ (ರೂ. ಒಂದು ಸಾವಿರದ ಅರವತ್ತು ಲಕ್ಷಗಳು ಮಾತ್ರ) ಪರಿಷ್ಕರಿಸಿ ಸರ್ಕಾರದ ಅನುಮೋದನೆಯನ್ನು ಈ ಕೆಳಕಂಡ ಷರತ್ತಿಗಳಿಗೊಳಪಟ್ಟು ನೀಡಿದೆ.

(i) No market borrowings (from HUDCO etc.) is allowed :

(ii) Limiting UDA's overall investment in the project to only 10-15% of its own resources mainly using it as seed capital ;

(iii) UDA should allot the sites as per the KUDA Allotment Rules upfront and create a scheme to collect amount from the allottees in two to three installments, which should be maintained in a separate project account and the same should be used for development of this project only. Any development work should be taken up only with this amount. The terms and conditions should be specified unambiguously with suitable action in case of default. Installments should be fixed as per the project timeline ;

(iv) While pricing sites, all the cost including possible enhancement in land acquisition compensation and expected returns for the UDA should be suitably accounted for ;

(v) Proper market survey to be done to ascertain the demand for such sites. Also UDA's previous history of un-allotted or vacant sites needs also to be kept in mind ;

(vi) Detailed financial and technical analysis to be done by the authority over the cost and expenditure aspects. In no case, UDA be allowed to expose itself to vagaries of the project. The project must be designed to self-sustain itself with positive and profitable rate of return without being further financial liability over the UDA ;

(vii) There must be clarity about financial feasibility of the project with such a heavy loan exposure. If one area alone is developed what about activities by UDA for remaining areas in Koppal. All these issues need to be addressed ;

(viii) No support will be forthcoming from Government for this project ;

(ix) Since the development of such sites and services schemes is a shortterm project, it is eminently possible to involve the allottees financially from the beginning. Apart from reducing interest costs and locking in of UDA's limited funds, this will also ensure better project discipline avoiding time cost overrun. This will also take care of the market risk for the investment made in this project. There are many examples where UDA projects have not yielded the kind of demand that was projected when projects were taken up ;

(x) In case of default of the instructions given by the government, suitable action will be taken against the concerned officers and officials. The Installments for allotment of sites should be fixed as per the project timeline ;

(xi) Sites should be priced, keeping in view the cost escalation in the future and ensuring that full recovery of the cost of the land and development charges is made ;

(xii) Corner sites and commercial sites should be put to public auction as per rules, in order to get more revenue ;

(xiii) Allotment of sites should be made before the development of the layout begins so that allottees can monitor the development of the layout which will avoid cost overrun ;

(xiv) ಸದರಿ ಕಾಮಗಾರಿಯನ್ನು ನಿರ್ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಮತ್ತು ನಿಯಮ 2000ನ್ನು ಪಾಲಿಸತಕ್ಕದ್ದು ;

(xv) ಕಾಮಗಾರಿಗಳ ಟೆಂಡರ್‌ಗಳನ್ನು ರಾಜ್ಯ ಟೆಂಡರ್ ಬುಲೆಟಿನ್‌ನಲ್ಲಿ ಕರೆಯಲು ರಾಜ್ಯ ಟೆಂಡರ್ ಬುಲೆಟಿನ್ ಅಧಿಕಾರಿಯಿಂದ ಅನುಮೋದನೆ ಪಡೆಯತಕ್ಕದ್ದು ;

(xvi) ಕಾಮಗಾರಿಗಳ ಗುತ್ತಿಗೆ ನೀಡುವ ಮುನ್ನ ನಿಯಮಾವಳಿಯಂತೆ ಸರ್ಕಾರದ ಅನುಮೋದನೆ ಪಡೆದು ಗುತ್ತಿಗೆಯನ್ನು ನೀಡತಕ್ಕದ್ದು;

(xvii) ಈ ಯೋಜನೆಯಡಿ ನಿಗದಿಗೊಳಿಸಲಾದ ಟೆಂಡರ್ ಪ್ರೀಮಿಯಂ ಏಸ್ಕಲೇಷನ್ ಹಾಗೂ ಇತರೆ ಹೆಚ್ಚುವರಿ ಮೊತ್ತವನ್ನು ಮೂಲ ಅಂದಾಜು ಮೊತ್ತದಲ್ಲಿ ಸೇರಿಸತಕ್ಕದ್ದಲ್ಲ ;

(xviii) ನೀರು ಸರಬರಾಜು/ಒಳಚರಂಡಿ ಮತ್ತು ವಿದ್ಯುತ್ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಟೆಂಡರ್‌ಗಳನ್ನು ಆಹ್ವಾನಿಸತಕ್ಕದ್ದು ;

(xix) ಕಾಂಪೌಂಡ್ ಸಿವಿಲ್ ಕಾಮಗಾರಿಗಳ ಪೈಕಿ ಕಾಂಪೌಂಡ್ ಕಾಮಗಾರಿಗಳನ್ನು ಅಗತ್ಯವಿದ್ದ ಸಾರ್ವಜನಿಕ ಉಪಯುಕ್ತ ಸ್ಥಳಗಳಲ್ಲಿ ಅಂದರೆ ಪಾರ್ಕ್ ಇತ್ಯಾದಿಗಳ ಅಭಿವೃದ್ಧಿಗೊಳಿಸಿದ ನಂತರ ಮಾತ್ರ ನಿರ್ಮಿಸಿ ಸ್ಥಳೀಯ ಸಂಸ್ಥೆಗೆ ಹಸ್ತಾಂತರಿಸುವ ಸಮಯದಲ್ಲಿ ನಿರ್ವಹಿಸತಕ್ಕದ್ದು ;

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 431 ವೆಚ್ಚ–9/2012, ದಿನಾಂಕ : 1–10–2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**P.R. 63**

## ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಬಿ.ಐ. ಮುಲ್ಲಾ, ರೇಷ್ಮೆ ಪ್ರವರ್ತಕರು ಇವರ ಅನಧಿಕೃತವನ್ನು ಕರ್ತವ್ಯವಲ್ಲದ ಅವಧಿ (Dies non) ಎಂದು ಪರಿಗಣಿಸಿ, ಪರೀಕ್ಷಾ ಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿ1(5)/ರೇಪ್ರವ/ಪಪೂಅ/33/2006–07, ದಿನಾಂಕ : 8–5–2012 ಮತ್ತು 15–9–2012.

**ಪ್ರಸ್ತಾವನೆ :**

ಶ್ರೀ ಬಿ.ಐ. ಮುಲ್ಲಾ ಇವರು ದಿನಾಂಕ: 16–2–1980 ರಂದು ಕಾರ್ಯವರದಿ ಮಾಡಿಕೊಂಡಿರುತ್ತಾರೆ. ಇವರು ನಿಗದಿತ ಅವಧಿಯಲ್ಲಿ ಇಲಾಖಾ ಪರೀಕ್ಷೆಯನ್ನು ಪಾಸು ಮಾಡಿಕೊಂಡು ಕರ್ತವ್ಯ ನಿರ್ವಹಿಸಿದ್ದಲ್ಲಿ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ : 17–2–1982 ಕ್ಕೆ ಘೋಷಣೆ ಮಾಡಬೇಕಾಗಿತ್ತು. ಆದರೆ, ಈ ಅವಧಿಯಲ್ಲಿ ಅವರು ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರುವುದಿಲ್ಲ ಹಾಗೂ ಈ ನೌಕರನ ಪರಿವೀಕ್ಷಣಾ ಅವಧಿಯಲ್ಲಿರುವಾಗಲೇ 1012 ದಿನಗಳ ಅವಧಿಗೆ ಗೈರುಹಾಜರಾಗಿರುತ್ತಾರೆ. ಈ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿಯೆಂದು (DIES NON) ಪರಿಗಣಿಸಿ ಸಕ್ರಮಗೊಳಿಸುವಂತೆ ಹಾಗೂ ನೌಕರರು ಇಲಾಖಾ ಪರೀಕ್ಷೆಯನ್ನು ದಿನಾಂಕ: 20–4–1989 ರಂದು ಪಾಸು ಮಾಡಿಕೊಂಡಿದ್ದು. ನೌಕರರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 4(1)(ii) ರನ್ವಯ ದಿನಾಂಕ: 16–2–1982 ರಿಂದ 15–2–1983 ರವರೆಗೆ ವಿಸ್ತರಿಸಿ ಆದೇಶಿಸಲಾಗಿದ್ದು. ದಿನಾಂಕ : 16–2–1983 ರಿಂದ 20–4–1989 ರವರೆಗೆ ಪರೀಕ್ಷಾರ್ಥ ಅವಧಿ ಘೋಷಣೆಯಾಗಬೇಕಿದ್ದು. ನೌಕರರು ಅನಧಿಕೃತವಾಗಿ ಗೈರುಹಾಜರಾಗಿರುವ 1012 ದಿನಗಳನ್ನು ಮುಂದೂಡಿ, ಪರೀಕ್ಷಾರ್ಥ ಅವಧಿಯನ್ನು ವಿಸ್ತರಿಸುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಮೇಲೆ ಓದಲಾದ ಪತ್ರಗಳಲ್ಲಿ ಕೋರಿರುತ್ತಾರೆ.

ಶ್ರೀ ಬಿ.ಐ. ಮುಲ್ಲಾ, ರೇಷ್ಮೆ ಪ್ರವರ್ತಕರು ಪರಿವೀಕ್ಷಣಾ ಅವಧಿಯಲ್ಲಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 114(8) ರನ್ವಯ ತಾತ್ಕಾಲಿಕ ನೌಕರರಾಗಿರುತ್ತಾರೆ. ನೌಕರರು ಪರಿವೀಕ್ಷಣಾ ಅವಧಿಯಲ್ಲಿ 1012 ದಿನಗಳು ಅನಧಿಕೃತ ಗೈರು ಹಾಜರಾಗಿದ್ದು. ಸದರಿ ಅನಧಿಕೃತ ಗೈರು ಹಾಜರಿಯನ್ನು ವಿಸ್ತರಿಸಿ ಸಕ್ರಮಗೊಳಿಸಲು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸಕ್ಷಮ ಪ್ರಾಧಿಕಾರವಾಗಿರುವುದಿಲ್ಲವಾದ್ದರಿಂದ ಈ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ. ಅನಧಿಕೃತವಾಗಿ ಗೈರುಹಾಜರಾಗಿರುವ ಅವಧಿಯನ್ನು ಕರ್ತವ್ಯವಲ್ಲದ ಅವಧಿಯೆಂದು (DIES-NON) ಪರಿಗಣಿಸಲು ಹಾಗೂ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ : 16–2–1983 ರಿಂದ 20–4–1989 ರವರೆಗೆ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1) (i) ರನ್ವಯ ವಿಸ್ತರಿಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 157 ರೇಇವಿ 2012, ಬೆಂಗಳೂರು, ದಿನಾಂಕ : 05–01–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಬಿ.ಐ. ಮುಲ್ಲಾ, ರೇಷ್ಮೆ ಪ್ರವರ್ತಕರು, ಚಾಕಿ ಸಾಕಾಣಿಕಾ ಕೇಂದ್ರ, ಹುಲಕುಂದ ಇವರು ಪರಿವೀಕ್ಷಣಾ ಅವಧಿಯಲ್ಲಿ ದಿನಾಂಕ : 18–12–1996 ರಿಂದ 24–9–1999 ರವರೆಗೆ (1012 ದಿನಗಳು) ಗೈರುಹಾಜರಾಗಿರುವ ಅವಧಿಯನ್ನು ಕರ್ತವ್ಯವಲ್ಲದ ಅವಧಿಯೆಂದು (DIES-NON) ಪರಿಗಣಿಸಿದೆ ಹಾಗೂ ನೌಕರರ ಪರಿವೀಕ್ಷಣಾ ಅವಧಿಯನ್ನು ದಿನಾಂಕ : 16–2–1983 ರಿಂದ 20–4–1989 ರವರೆಗೆ ಕರ್ನಾಟಕ ನಾಗರೀಕಾ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1) (i) ರನ್ವಯ ವಿಸ್ತರಿಸಿ ಹಾಗೂ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದ ಅವಧಿಗೆ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ನೌಕರರಿಗೆ ಕಾಲ್ಪನಿಕವಾಗಿ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸಬಹುದು. ಆದರೆ ವಿಸ್ತರಿಸಿದ ಅವಧಿಗೆ ಯಾವುದೇ ವೇತನ ಬಾಕಿಯನ್ನು ನೀಡುವಂತಿಲ್ಲವೆಂದು ಆದೇಶಿಸಿದೆ. ಸದರಿ ನಿಯಮಾವಳಿಗಳ ನಿಯಮ 10 ರಂತೆ ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ/1143/ಸೇ–1/2012, ದಿನಾಂಕ : 13–11–2012 ರನ್ವಯ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–7–1996 ರಲ್ಲಿ ಪ್ರಧಾನ ಕಾರ್ಯದರ್ಶಿರವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಎಸ್. ಚಂದ್ರಶೇಖರ್**
ಪೀಠಾಧಿಕಾರಿ,
ತೋಟಗಾರಿಕೆ ಇಲಾಖೆ (ರೇಷ್ಮೆ).

**P.R. 64**

## ತೋಟಗಾರಿಕೆ ಸಚಿವಾಲಯ

**ವಿಷಯ** : ಶ್ರೀ ಮಹಮ್ಮದ್ ರಿಯಾಜ್ ಅಹಮ್ಮದ್, ಹಿರಿಯ ರೇಷ್ಮೆ ನಿರೀಕ್ಷಕರು (ನಿವೃತ್ತ) ಇವರಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಹಣವನ್ನು ಇವರ ನಿವೃತ್ತಿ ಸೌಲಭ್ಯದಿಂದ–ವಸೂಲಿ ಮಾಡುವ ಬಗ್ಗೆ.

**ಓದಲಾಗಿದೆ :**

1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ನಡವಳಿ ಸಂಖ್ಯೆ: ಸಿಬ್ಬಂದಿ/3/ಶಿಸ್ತು/ದಿಬಿಸಿ/1/2001–02, ದಿನಾಂಕ : 21–10–2005.
2. ಸರ್ಕಾರದ ಆದೇಶ ಸಂಖ್ಯೆ : ವಾಕೈ 69 ರೇಇವಿ 2006, ದಿನಾಂಕ ; 16–4–2007.
3. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ಸಿಬ್ಬಂದಿ1(6)/ಹಿರೇನಿ/ಕಾಮಿಬ–12/2011–12, ದಿನಾಂಕ : 11–4–2012
4. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ಸಿಬ್ಬಂದಿ1(6)/ಹಿರೇನಿ/ಕಾಮಿಬ–12/2011–12, ದಿನಾಂಕ: 26–7–2012 ಮತ್ತು 26–9–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 21–10–2005ರ ನಡವಳಿಯಲ್ಲಿ ಶ್ರೀ ಮಹಮ್ಮದ್ ರಿಯಾಜ್ ಅಹಮ್ಮದ್, ಹಿರಿಯ ರೇಷ್ಮೆ ನಿರೀಕ್ಷಕರು ಇವರು ಈ ಹಿಂದೆ ರೇಷ್ಮೆ ಬಿತ್ತನೆ ಕೋಠಿ, ಶ್ರೀನಿವಾಸಪುರ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಎಸಗಿರುವ ದುರ್ನಡತೆ ಹಾಗೂ ಹಣ ದುರುಪಯೋಗದ ಆರೋಪಗಳಿಗೆ ಸಂಬಂಧಿಸಿದಂತೆ ಸದರಿಯವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ಹಾಗೂ ಸರ್ಕಾರಕ್ಕೆ ಉಂಟಾದ ನಷ್ಟ ಒಟ್ಟು ಮೊಬಲಗು ರೂ. 7,25,169/– ಗಳನ್ನು ಇವರಿಗೆ ಲಭ್ಯವಾಗುವ ನಿವೃತ್ತಿ ಉಪದಾನ ರಜೆ ನಗದೀಕರಣ, ನಿವೃತ್ತಿ ವೇತನ ಪರಿವರ್ತಿತ ಪಿಂಚಣಿಯಿಂದ ವಸೂಲಿ ಮಾಡಲು ಹಾಗೂ ಸದರಿ ಮೊತ್ತವು ಇನ್ನೂ ಬಾಕಿ ಉಳಿದ ಪಕ್ಷದಲ್ಲಿ ಇವರ ಪಿಂಚಣಿಯಿಂದ ತಿಂಗಳಿಗೆ ಕನಿಷ್ಠ ಮೊತ್ತ ರೂ. 1,030/–ಗಳನ್ನು ಪಾವತಿಸಿ, ಉಳಿದ ಮೊತ್ತವನ್ನು ಪೂರ್ಣ ಮೊತ್ತ ವಸೂಲಾಗುವವರೆಗೂ ಕಟಾಯಿಸಲು ಮತ್ತು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತಿನ ಅವಧಿ ಎಂದು ಪರಿಗಣಿಸಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಆದೇಶಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ : 16–4–2007ರ ಆದೇಶದಲ್ಲಿ ಶ್ರೀ ಮಹಮದ್ ರಿಯಾಜ್ ಅಹಮ್ಮದ್, ಹಿರಿಯ ರೇಷ್ಮೆ ನಿರೀಕ್ಷಕರು ಇವರು ಮೇಲ್ಮನವಿ ಪ್ರಾಧಿಕಾರಿಯಾದ ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ ಇವರಿಗೆ ದಿನಾಂಕ : 26–1–2006 ರಂದು ಸಲ್ಲಿಸಿರುವ ಮೇಲ್ಮನವಿಯನ್ನು ತಿರಸ್ಕರಿಸಿ. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ದಿನಾಂಕ : 21–10–2005ರ ನಡವಳಿಯನ್ನು ಸ್ಥಿರೀಕರಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ : 11–4–2012ರ ಪತ್ರದಲ್ಲಿ ಶ್ರೀ ಮಹಮದ್ ರಿಯಾಜ್ ಅಹಮ್ಮದ್ ಇವರು ಸರ್ಕಾರಕ್ಕೆ ಬರಬೇಕಾದ ಬಾಕಿ ಬಗ್ಗೆ ಒಪ್ಪಿಗೆ ಪತ್ರ ಸಲ್ಲಿಸಿರುವುದರಿಂದ ಹಾಗೂ ಕೋಲಾರದ ಜಿಲ್ಲಾ ನ್ಯಾಯಾಲಯವು ಸಹ ಹಣವನ್ನು ಸಂಬಂಧಪಟ್ಟ ನೌಕರರಿಂದ ವಸೂಲಿ ಮಾಡಲು ಡಿಕ್ರಿ ನೀಡಿರುವುದರಿಂದ ಸದರಿ ನೌಕರರಿಂದ ಸರ್ಕಾರಕ್ಕೆ ಬರಬೇಕಾದ ಒಟ್ಟು ರೂ. 8,58,357/– (ರೂ. 7,25,169/– + 1,33,188/–) ಗಳನ್ನು ವಸೂಲು ಮಾಡಿ ಸರ್ಕಾರಕ್ಕೆ ಜಮಾ ಮಾಡಲು ಅಗತ್ಯ ಕ್ರಮ ಕೈಗೊಳ್ಳುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಮಹಾಲೇಖಪಾಲರನ್ನು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ : 26–7–2012 ಮತ್ತು 26–9–2012ರ ಪತ್ರಗಳಲ್ಲಿ ಶ್ರೀ ಮಹಮದ್ ರಿಯಾಜ್ ಅಹಮ್ಮದ್, ಹಿರಿಯ ರೇಷ್ಮೆ ನಿರೀಕ್ಷಕರು (ಕಡ್ಡಾಯ ನಿವೃತ್ತಿ) ಇವರಿಂದ ಸರ್ಕಾರಕ್ಕೆ ಬರಬೇಕಾದ ಒಟ್ಟು ರೂ. 8,58,357/– (ರೂ. 7,25,169/– + ರೂ. 1,33,188/–) ಗಳನ್ನು ವಸೂಲು ಮಾಡಿ ಸರ್ಕಾರಕ್ಕೆ ಜಮಾ ಮಾಡಲು ಅಗತ್ಯ ಕ್ರಮ ಕೈಗೊಳ್ಳಲು ಮಹಾಲೇಖಪಾಲರಿಗೆ ಪತ್ರ ಬರೆದು ಪ್ರಕರಣವನ್ನು ಇತ್ಯರ್ಥಪಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು. ಶ್ರೀ ಮಹಮದ್ ರಿಯಾಜ್ ಅಹಮ್ಮದ್, ಕಿರಿಯ ರೇಷ್ಮೆ ನಿರೀಕ್ಷಕರು (ಕಡ್ಡಾಯ ನಿವೃತ್ತ) ಇವರಿಂದ ಸರ್ಕಾರಕ್ಕೆ ಬರಬೇಕಾದ ರೂ. 8,58,357/– (ರೂ. 7,25,169/– + 1,33,188/–) ಗಳನ್ನು ನೌಕರರಿಗೆ ಲಭ್ಯವಾಗುವ ನಿವೃತ್ತಿ ಉಪದಾನ ರಜೆ ನಗದೀಕರಣ ಹಾಗೂ ಪರಿವರ್ತಿತ ಪಿಂಚಣಿಗಳಿಂದ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214(1)(ಬಿ)ರಡಿಯಲ್ಲಿನ ಉಪನಿಯಮ 5 ರಲ್ಲಿ ನಿರ್ಬಂಧಿಸಿರುವ 1/3ನೇ ಭಾಗದ ಪಿಂಚಣಿ ಪ್ರಮಾಣಕ್ಕೆ ಮೀರದಂತೆ ಮಿತಿಗೊಳಿಸಿ ಕಟಾಯಿಸಿ ಸರ್ಕಾರಕ್ಕೆ ಜಮಾ ಮಾಡುವ ಬಗ್ಗೆ ಸರ್ಕಾರವು ನಿರ್ಣಯಿಸಿರುವ ಮೇರೆಗೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ತೋಇ 111 ರೇಇವಿ 2011, ಬೆಂಗಳೂರು, ದಿನಾಂಕ : 04–01–2013.**

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಶ್ರೀ ಮಹಮದ್ ರಿಯಾಜ್ ಅಹಮ್ಮದ್, ಹಿರಿಯ ರೇಷ್ಮೆ ನಿರೀಕ್ಷಕರು (ಕಡ್ಡಾಯ ನಿವೃತ್ತ) ಇವರಿಂದ ಸರ್ಕಾರಕ್ಕೆ ಬರಬೇಕಾದ ರೂ. 8,58,357/– (ರೂ. 7,25,169/– + 1,33,188/–) ಗಳನ್ನು ನೌಕರರಿಗೆ ಲಭ್ಯವಾಗುವ ನಿವೃತ್ತಿ ಉಪದಾನ, ರಜೆ ನಗದೀಕರಣ ಹಾಗೂ ಪರಿವರ್ತಿತ ಪಿಂಚಣಿಗಳಿಂದ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214(1)(ಬಿ) ರಡಿಯಲ್ಲಿನ ಉಪನಿಯಮ 5 ರಲ್ಲಿ ನಿರ್ಬಂಧಿಸಿರುವ 1/3ನೇ ಭಾಗದ ಪಿಂಚಣಿ ಪ್ರಮಾಣಕ್ಕೆ ಮೀರದಂತೆ ಮಿತಿಗೊಳಿಸಿ ಕಟಾಯಿಸ ಸರ್ಕಾರಕ್ಕೆ ಜಮಾ ಮಾಡುವಂತೆ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ/193/ಪಿಇಎನ್–1/2012, ದಿನಾಂಕ : 28–12–2012 ರಲ್ಲಿ ನೀಡಿರುವ ಸಹಮತಿ ಮತ್ತು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ : 10–7–1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಎಸ್. ಚಂದ್ರಶೇಖರ್**

ಪೀಠಾಧಿಕಾರಿ,

ತೋಟಗಾರಿಕೆ ಇಲಾಖೆ (ರೇಷ್ಮೆ).

**P.R. 65**

## ಇಂಧನ ಸಚಿವಾಲಯ

**ವಿಷಯ:** ಮೆ.ಜಿ.ಎಮ್. ಶುಗರ್ಸ್ & ಎನರ್ಜಿ ಲಿಮಿಟೆಡ್ ರವರಿಗೆ 18 ಮೆ.ವ್ಯಾ. ಸಾಮರ್ಥ್ಯದ ಸಹ–ವಿದ್ಯುತ್ ಘಟಕವನ್ನು ಸ್ಥಾಪಿಸಲು ನೀಡಿರುವ ನಿರಾಕ್ಷೇಪಣೆಯನ್ನು ಪರಿಷ್ಕರಿಸುವ ಬಗ್ಗೆ.

